# ಅಗ್ನಿ ಅಂಕುರ

ನಮ್ಮ ನಿಮ್ಮೆಲ್ಲರ ಮೆಚ್ಚಿನ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೩ ಮಾರ್ಚ ೨೦೦೯ ಬೆಲೆ : ೧೦ ರೂ/



## ಶಹಾಪುರ ಪುರಸಭೆಯಲ್ಲಿ ಕೋಟ್ಯಂತರ ಲೂಟಿ

## ಮಹಾನಗರ ಪಾಲಿಕೆ ಜಂಗಿಕುಸ್ತಿಗೆ ಕಾರಣವೇನು?



## ಬ್ರಾಹ್ಮಣನ ಜೊತೆ ಕುಳಿತ ಶೂದ್ರನ ಕುಂಡೆ ಕತ್ತರಿಸಬೇಕು



## ಗುರು ಪಾದಸ್ವ ಮತ್ತೆ ಬಿಡ್ಡಿ ಗೇಟ್ಸ್ ನಲ್ಲಿ ಪ್ರತ್ಯಕ್ಷ



## ನಗು ದೇಹಸಿರಿಯನ್ನು ಹೆಚ್ಚಿಸುತ್ತದೆ

## ಶುಭಾಶಯಗಳು



## ನಾಡಿನ ಎಲ್ಲರಿಗೂ ಯುಗಾದಿ ಹಬ್ಬದ ಶುಭಾಶಯಗಳು

ಶ್ರೀ ಶರಣು ಎಂ. ಗುಡಗುಂಟಿ

ಇಟ್ಟಂಗಿಬಟ್ಟಿ ಮಾಲೀಕರು

ಶಹಾಪುರ ಕಲಬುರ್ಗಿ : ಜಿಲ್ಲೆ

ಸಂಚಾರ : 9972293676

# ಅಗ್ನಿ ಅಂಕುರ

## ನಮ್ಮ ನಿಮ್ಮೆಲ್ಲರ ಪತ್ರಿಕೆ

ಸಂಪುಟ : ೧೩ ಸಂಚಿಕೆ : ೩ ಮಾರ್ಚ - ೨೦೦೯ ಬೆಲೆ : ೧೦ ರೂ/.

ಸಂಪಾದಕರು

**ವಿಶ್ವಾರಾಧ್ಯ ಸತ್ಯಂಪೇಟೆ**



ಪ್ರಕಾಶನ

ಅಗ್ನಿ ಅಂಕುರ ಪತ್ರಿಕೆ ಪ್ರಕಾಶನ ಬಸವ ಮಾರ್ಗ ಸಿ.ಬಿ.ಕಾಲನಿ

ಶಹಾಪುರ - ೫೮೫ ೨೨೩ ಕಲಬುರ್ಗಿ ಜಿಲ್ಲೆ

ಸಂಚಾರ : 9480161315 e-mail : satyampet.2007@rediffmail.com

# ಅಗ್ನಿಅಂಕುರ ಪತ್ರಿಕೆಯ ನಿನಗೆ ಒಂದು ಗತಿ ಕಾಣಿಸುತ್ತೇವೆ

ಅಗ್ನಿ ಅಂಕುರ

ಕೊಡೆಕಲ್ ಮಠದಲ್ಲಿ ಡಿಂಗ್ ಡಾಂಗ್

ತಾಲೀಬಾನೀಕರಣಗೊಳ್ಳುತ್ತಿರುವ ಹಿಂದೂ ಸಂಘಟನೆಗಳು

ಚುಕುಬುಕು ರೈಲು !

ಆತ್ಮೀಯ ವಿಶ್ವಾರಾಧ್ಯ ಸತ್ಯಂಪೇಟೆ
ಅವರಿಗೆ ನಮಸ್ಕಾರಗಳು,

ಹೋರಾಟದ ಕೆಂಡವಾಗಿದ್ದ ಪ್ರೊ.ಎಂ.ಡಿ. ನಂಜುಂಡಸ್ವಾಮಿಯ ಕುರಿತು ಬರೆದ ತಮ್ಮ ಬರಹ ಸಕಾಲಿಕ. ನಂಜುಂಡಸ್ವಾಮಿ ಅವರು ಹೇಗಿದ್ದರೋ ಹಾಗೆ ಬರೆದು ತಮ್ಮ ಪ್ರೌಢಿಮೆಯನ್ನು ಮೆರೆದಿರುವಿರಿ.

ಆದರೆ ಒಂದು ಸಂಗತಿ ಮಾತ್ರ ಆದೇಕೋ ನನ್ನನ್ನು ಕಾಡುತ್ತಲೆ ಇದೆ. ರಾಯಚೂರಿನ ಮಂತ್ರಾಯರಾಘವೇಂದ್ರ ಸ್ವಾಮಿಯ ಗುಡಿಯ ಬೃಂದಾವನದಲ್ಲಿ ಕಾಲಲ್ಲಿ ಚಪ್ಪಲಿ ಹಾಕಿಕೊಂಡು ಪ್ರೊಫೆಸರ್ ತಿರುಗಾಡಿ ಬಂದದ್ದೂ ಸ್ವಲ್ಪ ಅತಿರೇಕದ ಪರಮಾವಧಿಯಂತಾಗಿದೆ, ಅನಿಸುತ್ತದೆ.

ಅಥವಾ ತಾವೇ ಈ ರೀತಿಯ ಉತ್ಪ್ರೇಕ್ಷಿತ ಬರಹ ಬರೆದಿರುವ ಸಾಧ್ಯತೆಯೂ ಇದೆಯಾದ್ದರಿಂದ ಈ ಬಗ್ಗೆ ತಮ್ಮ ಅಭಿಪ್ರಾಯವನ್ನು ಅಪೇಕ್ಷಿಸಿದ್ದೇನೆ.

ಗುಲ್ಬರ್ಗಾ ೦ ಶ್ರೀನಿವಾಸ ಕುಲ್ಕರ್ಣಿ

ಪ್ರೊ.ನಂಜುಂಡಸ್ವಾಮಿಯ ಕುರಿತ ಬರೆದಿರುವ ಬರಹದಲ್ಲಿ ಯಾವುದೂ ಉತ್ಪ್ರೇಕ್ಷೆ ಎನ್ನುವ ಮಾತು ಇಲ್ಲ. ಎಲ್ಲವೂ ಇದ್ದದ್ದು ಇದ್ದಂತೆ ಬರೆಯಲಾಗಿದೆ. – ಸಂ.

# ನಿನ್ನ ಮಾತು ಬಹಳ ಖಾರ ಅನಸ್ತದ !

ಪ್ರೀತಿಯ ವಿಶ್ವಾರಾಧ್ಯ

ನಿನ್ನ ಪತ್ರಿಕೆ ಬಂದ ಕೂಡ್ಲೆ ನೋಡ್ತಿನಿ. ಸ್ವಲ್ಪ ಚಿಂತಿಸೂ ಆಗತಾದ. ನೀನು ಇದ್ದದ್ದು ಇದ್ದಂಗೆ ಬರದಿರಬಹುದು. ಆದ್ರ ನಿನ್ನ ಮಾತು ಬಹಳ ಖಾರ ಅನಸ್ತದ. ಈಗ ಕಾಲ ಹಿಂದಿನಂಗಿಲ್ಲ, ಬರೀ ದುರುಳರದೆ ದರ್ಭಾರ ನಡದದ. ಸ್ವಲ್ಪ ಹುಷಾರೋ ತಮ್ಮಾ.... !

ಸ್ವಾಮಿಗಳಿಗೂ ಲಗ್ನ ಮಾಡಿ ಮಠಕ್ಕ ಬಿಡೋ ನಿನ್ನ ಪ್ಲ್ಯಾನ್‌ನ ಹಿಂದೆ ಸ್ವಾಮಿಗಳು ಆದಾರೇನು ? ಹಂಗಾದ್ರ ಲಿಂಗಾಯತ ಮಠಗಳು ಉದ್ಧಾರ ಆದಂಗ್ಹೆ.

ಹೌದಲ್ಲೋ ಈ ಬಗ್ಗೆ ಸಮಾಜದ ಎಲ್ಲಾ ಮುಖಂಡರು ಒಂದ್ ಕಡೆ ಕುಂತು ಗಂಭೀರ ಚರ್ಚೆಗೆ ತೊಡಗಬೇಕಾಗ್ಯಾದ. ೦ ಡಾ.ಎಂ.ಎಂ.ಕಲ್ಬುರ್ಗಿ , ಧಾರವಾಡ

## ನಮ್ಮ ಪತ್ರಿಕೆಯ ಕಾನೂನು ಸಲಹೆಗಾರರು

ಸರ್ವಶ್ರೀ ಗೋಪಾಲ ಎಸ್. , ಟಿ.ನಾಗೇಂದ್ರ ಸುರಪುರ , ರಮೇಶ ಸೇಡಂಕರ, ಹೊನ್ನಾರೆಡ್ಡಿ ಹಾಗೂ ವಿಶ್ವನಾಥ ಮುಂಡಾಸ, ಸಂತೋಷ ಸತ್ಯಂಪೇಟೆ,ಬಸ್ಸನಗೌಡ ದೇಸಾಯಿ ದೇವದುರ್ಗ, ಹೇಮರಡ್ಡಿ ಕೊಂಗಂಡಿ, ರವಿ ಅಳುಂಡಿ ದೇವದುರ್ಗ , ವೆಂಕಟರಡ್ಡಿ ಬೋನ್ನಾಳ .......

# ಅಗ್ನಿಯ ಅಂತರಂಗ















ಸಂಪಾದಕೀಯ

# ಶಾಸಕ ದರ್ಶನಾಪುರರಿಗೊಂದು ಬಹಿರಂಗ ಪತ್ರ

ಸನ್ಮಾನ್ಯ ಶರಣಬಸಪ್ಪ ದರ್ಶನಾಪುರ
ಶಾಸಕರು ಶಹಾಪುರ ಇವರಿಗೆ

ತಾವು ಶಹಾಪುರ ಮತಕ್ಷೇತ್ರದ ಜನತೆಗೆ ಚಿರಪರಿಚಿತರಾಗುವುದಕ್ಕಿಂತ ಮುಂಚೆ ಬಾಪುಗೌಡರ ಪುತ್ರರು ಎಂದು ಮಾತ್ರ ಬೆರಳೆಣಿಕೆಯ ಜನಕ್ಕೆ ಗೊತ್ತಿತ್ತು. ಆದರೆ ತಮ್ಮ ತಂದೆಯವರು ಕ್ಷೇತ್ರದ ಬಗೆಗೆ ಇಟ್ಟುಕೊಂಡಿದ್ದ ಕಾಳಜಿ, ತಮ್ಮ ರಕ್ತ ಸಂಬಂಧಿಗಳನ್ನು ತಮ್ಮ ಹತ್ತಿರಕ್ಕೂ ಬಿಟ್ಟುಕೊಳ್ಳದೆ ಇರುತ್ತಿದ್ದ ಛಾತಿಯಿಂದಾಗಿ ಅವರು ಜನಮಾನಸವನ್ನು ಗೆದ್ದುಕೊಂಡಿದ್ದರು. ಯಾರೊಂದಿಗೂ ಯಾವತ್ತಿಗೂ ದ್ವೇಷ ಸಾಧನೆಯ ಜಾಯಮಾನ ಅವರದಲ್ಲ ಎಂದೂ ಗೊತ್ತಾಗಿಯೂ ಅವರ ಜನಪ್ರಿಯತೆ ಹೆಚ್ಚುವರಿಗೊಂಡಿತ್ತು.

ಒಳ್ಳೆಯ ಹೆಸರು ಗಳಿಸಿಕೊಂಡಿದ್ದ ದಿ.ಬಾಪುಗೌಡರ ಪುತ್ರರಾದ, ಅಲ್ಲದೆ ಒಬ್ಬ ಬಿ.ಇ. ಪದವಿಧರನಾಗಿದ್ದ ತಮ್ಮ ಮೇಲೆ ಈ ಕ್ಷೇತ್ರದ ಜನತೆ ಇನ್ನೂ ಹೆಚ್ಚಿನ ಭರವಸೆಯನ್ನು ಇಟ್ಟುಕೊಂಡಿದ್ದರು. ಈ ಕಾರಣಕ್ಕಾಗಿಯೆ ಅಗ್ನಿ ಅಂಕುರ ಮೊಟ್ಟ ಮೊದಲು ತಮ್ಮ ಭಾವಚಿತ್ರವನ್ನು ಪತ್ರಿಕೆಯಲ್ಲಿ ಪ್ರಕಟಿಸಿ ನಿಮ್ಮ ಬಗೆಗೆ ಒಳ್ಳೆಯ ಮಾತನ್ನು ಬರೆದಿತ್ತು. ತಾವು ಗೆದ್ದು ಬಂದರೆ ಇಡೀ ಕ್ಷೇತ್ರದ ಅಭಿವೃದ್ಧಿ ಸಾಧ್ಯವಾಗುತ್ತದೆ. ಎಲ್ಲೆಲ್ಲೋ ಹರಿದು ಹೋಗುತ್ತಿದ್ದ ಕೆ.ಬಿ.ಜೆ.ಎನ್. ಕಚೇರಿಯ ನೀರು ಹಾಗೂ ಹಣ ಪೋಲಾಗದಂತೆ ತಾವು ತಡೆಹಿಡಿಯುತ್ತೀರಿ ಎಂದು ಪತ್ರಿಕೆ ಭರವಸೆ ಹೊಂದಿತ್ತು. ಶಹಾಪುರ ಪಟ್ಟಣವಂತೂ ಎಲ್ಲಾ ದೃಷ್ಟಿಯಿಂದ ದಷ್ಟಪುಷ್ಟವಾಗಿ ಬೆಳೆಸುತ್ತೀರಿ ಎಂಬ ಭಾವನೆ ಜನತೆಗೆ ಇತ್ತು. ಇದೆಲ್ಲದರಿಂದ ಸಹಜವಾಗಿ ಶಹಾಪುರ ಜಿಲ್ಲೆಯಾಗುತ್ತದೆ ಎಂದು ಜನ ನಂಬಿದ್ದರು.

ಆದರೆ ತಾವು ಶಹಾಪುರ ಮತಕ್ಷೇತ್ರಕ್ಕೆ ಏನು ಮಾಡಿದ್ದೀರಿ ? ತಾವೇನು ಮಾಡಿಕೊಂಡಿದ್ದೀರಿ ? ತಮ್ಮ ಸುತ್ತ ಮುತ್ತಿನ ಪುಡಿಗಂಣಗಳು ಏನೇನು ಮಾಡಿದ್ದಾರೆ ? ಎಂಬ ಚಿತ್ರ ಎಲ್ಲ ಮತದಾರರ ಕಣ್ಣ ಮುಂದೆ ಇದೆ. ಈ ಅಂಗೈ ಹುಣ್ಣಿಗೆ ಕನ್ನಡಿ ಹಿಡಿಯುವ ಅವಶ್ಯಕತೆ ಇದೆಯೆ ? ಈ ಸಂಗತಿ ನನಗಿಂತಲೂ ನಿಮಗೇ ಚೆನ್ನಾಗಿ ಮನದಟ್ಟಾಗಿರುವಂಥದ್ದು. ಶಾಸಕತ್ವ ಸ್ಥಾನ ಎಂಬುದು ಕಮಾಯಿ ಮಾಡುವುದಕ್ಕೋ ? ಅಥವಾ ಸೇವಾಮನೋಭಾವನೆಯ ವ್ಯಕ್ತಿಗೆ ಇರುವಂಥ ಅವಕಾಶವೋ ? ನನಗಂತೂ ಸ್ಪಷ್ಟವಾಗಿ ಅರ್ಥವಾಗುತ್ತಿಲ್ಲ.

ಇದೆಲ್ಲ ಏನೇ ಇರಲಿ, ಶಹಾಪುರ ಪಟ್ಟಣದ ಪುರಸಭೆ, ತಾ.ಪಂ. , ಜಿ.ಪಂ. ಹಾಗೂ ತಹಶೀಲ ಕಛೇರಿ, ಜಲಾನಯನ ಮಂಡಳಿ, ಮುಂತಾದ ಸರಕಾರಿ

## ನಿಮ್ಮೊಂದಿಗೆ


ಪುರಸಭೆಯ ಅಧಿಕಾರಿ ಕೊಪ್ರೇಶಚಾರಿಯಿಂದ ಸನ್ಮಾನಿತಗೊಳ್ಳುತ್ತಿರುವ ಶಾಸಕ ದರ್ಶನಾಪುರ

ಕಛೇರಿಗಳ ಕೆಲಸಗಳು ಹಾಗೂ ಅವು ಇದುವರೆಗೆ ಮಾಡಿದ ಸಾಧನೆಗಳು ನೋಡುತ್ತಿದ್ದರೆ ಸಹಜವಾಗಿಯೆ ಶಹಾಪುರ ಸಂಪೂರ್ಣ ಅಭಿವೃದ್ಧಿಗೊಂಡ ನಗರ ಎಂದಾಗುತ್ತದೆ. ಇದುವರೆಗೆ ಸರಕಾರದ ಎಲ್ಲಾ ಅನುದಾನಗಳನ್ನು ಧಾರಾಳವಾಗಿ ಬಳಸಿಕೊಂಡಿರುವ ಈ ಮೇಲ್ಕಾಣಿಸಿದ ಇಲಾಖೆಗಳು ಏನೇನು ಕಡಿದು ಕಟ್ಟೆ ಹಾಕಿವೆ ? ಎಂಬುದು ಇಲ್ಲಿನ ಜನತೆ ಸ್ಪಷ್ಟವಾಗಿಯೆ ಹೇಳುತ್ತಾರೆ.

ಇದು ತಮ್ಮ ಗಮನಕ್ಕೆ ಬಾರದೆ ಇರುವ ಸಂಗತಿಯೂ ಅಲ್ಲ. ಏಕೆಂದರೆ ಈ ಎಲ್ಲಾ ಇಲಾಖೆಗಳಿಗೆ ಸರಕಾರದ ವಿವಿಧ ಬಾಬ್ತುಗಳಿಂದ ಹಣಕಾಸಿನ ಹೊಳೆಯನ್ನು ಹರಿಸಿದ್ದೀರಿ ಎಂಬುದೂ ಗೊತ್ತು. ಆದರೆ ಈ ಹಣ ಯಾವ ಕಡೆ ಹರಿದು ಹೋಗಿದೆ ಎಂಬುದು ಚಿದಂಬರ ರಹಸ್ಯವಾಗಿದೆ. ಇಷ್ಟೆಲ್ಲ ಭ್ರಷ್ಟತೆ ತಮ್ಮ ಕ್ಷೇತ್ರದ ಇಲಾಖೆಗಳಲ್ಲಿ ನಡೆಯುತ್ತಿದ್ದರೂ ತಾವು ತೆಪ್ಪಗೆ ಕುಳಿತದ್ದು ಏನು ತೋರಿಸುತ್ತದೆ ? ಎಂದು ಜನ ಗುಮಾನಿ ಪಡುತ್ತಿದ್ದಾರೆ. ಇದಕ್ಕೆಲ್ಲ ಉತ್ತರಿಸಬೇಕಾದವರೂ ನೀವೇ ತಾನೆ ?

ಶಹಾಪುರ ಪಟ್ಟದಣದ ಪುರಸಭೆಯ ಕಥೆ ಹೇಳಲಂತೂ ನಮ್ಮ ಪತ್ರಿಕೆಯ ಪುಟಗಳು ಸಾಕಾಗುವುದಿಲ್ಲ. ಯಾರಾದರೂ ಹೋಗಿ ಪುರಸಭೆಯ ಬಾಗಿಲಿಗೆ ನಿಂತರೆ ಅವರ ಕಿಸೆ ಜಡತಿಯಾಗುತ್ತದೆ. ಸಾರ್ವಜನಿಕರು ನೀಡುವ ತೆರಿಗೆಯ ಹಣದಲ್ಲಿ ಇಲ್ಲಿನ ಅಧಿಕಾರಶಾಯಿ ಎಲ್ಲವನ್ನು ನುಂಗಿನೊಣೆದಿದೆ. ಕೆಲಸಕ್ಕೆ ಬಾರದ ಯಾವ್ಯಾವುದೋ ಬಾಬ್ತುಗಳ ಹೆಸರು ಹೇಳಿ ಬಿಲ್ ಎಂಬ ಬಾಣವನ್ನು ಹಾರಿಬಿಟ್ಟಿದ್ದಾರೆ. ಇದೆಲ್ಲಕ್ಕೂ ತಾವೆ ಕಾರಣ ಎಂಬ ಸಬೂಬು ಬೇರೆ ಇಲ್ಲಿನ ಪುರಸಭೆಯ ಮುಖ್ಯಾಧಿಕಾರಿ ಹೇಳುತ್ತಾರೆ !ನಿಜಕ್ಕೂ ಇಷ್ಟೆಲ್ಲ ಅರಾಜಕತೆಗೆ ಕಾರಣ ಯಾರು ? ಎಂಬ ಸ್ಪಷ್ಟನೆ ನೀಡಬೇಕು. ಇಲ್ಲದೆ ಹೋದರೆ ನೀವು ಕಾಲನ ತುಳಿತಕ್ಕೆ ಒಳಗಾಗುವುದರಲ್ಲಿ ಸಂದೇಹವಿಲ್ಲ.

ಇತಿ ನಿಮ್ಮ ಪ್ರೀತಿಯ

**ವಿಶ್ವಾರಾಧ್ಯ ಸತ್ಯಂಪೇಟೆ**

# ಶಹಾಪುರ ಪುರಸಭೆಯನ್ನು ತಿಂದುಹಾಕಿರುವ ಹಂದಿ-ಹೆಗ್ಗಣಗಳು

ಶಹಾಪುರ ಪುರಸಭೆ ಎಂಬ ಹೆಗ್ಗಣಗಳ ದೊಡ್ಡಿಗೆ ತೀರಾ ಇತ್ತೀಚೆಗೆ ನಿಮ್ಮ ಅಗ್ನಿ ಅಂಕುರ ಪತ್ರಿಕೆ ಹೋಗುವ ಪ್ರಸಂಗವೊಂದು ಇದಿರಾಯಿತು. ಅದೇನು ಕಾರಣವೋ ಅಲ್ಲಿರುವ ಸದಸ್ಯರು ಹಾಗೂ ಅಧಿಕಾರಿಗಳೆಂಬ ಹೆಗ್ಗಣಗಳು ಪತ್ರಿಕೆಯ ನನ್ನನ್ನು ನೋಡುತ್ತಲೆ ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತು ಎಂಬಂತೆ ಒಂದೆ ಸಮ ಅಂಡುಸುಟ್ಟ ಬೆಕ್ಕಿನಂತೆ ಓಡಾಡತೊಡಗಿದವು.

ಈ ಎಲ್ಲಾ ಟೀಮಿನ ಮುಖ್ಯನಾದ ಪುರಸಭೆಯ ಮುಖ್ಯಾಧಿಕಾರಿ ಕೊಟ್ರೇಶಚಾರಿ ಮಾತ್ರ ತಾನು ಏನೆಲ್ಲ ತಿಂದುಂಡರೂ ಶರಣಬಸ್ಸಪ್ಪ ದರ್ಶನಾಪುರನ ಮುಕ್ಕುವಿಕೆ ಅತಿಯಾಗಿದೆರ್ರೀ.... ಇದನ್ನು ಇಲ್ಲಿ ಯಾರು ಕೇಳುವವರೆ ಇಲ್ಲ. ಇಲ್ಲಿರುವ ಸರ್ವ ಸದಸ್ಯರೂ ಕೂಡ ತಮಗೆ ಪರ್ಸೆಂಟೇಜ್ ಬೇಕೆಂದು ದುಂಬಾಲು ಬೀಳುತ್ತಾರೆ. ನಾನೊಬ್ಬನಾದರೂ ಏನು ಮಾಡುವುದಕ್ಕಾಗುತ್ತದೆ ? ೨೫ ವರ್ಷಗಳಿಗಿಂತಲೂ ಹೆಚ್ಚು ಕಾಲ ಸಿಂಧನೂರಿನಲ್ಲಿ ನೌಕರಿ ಮಾಡಿ ಬಂದಿದ್ದರೂ ಇಲ್ಲಿಯಂಥ ಹೊಲಸು ಅಲ್ಲಿರಲಿಲ್ಲ ಎಂಬು ಮುಂತಾಗಿ ಪ್ರವರ ಬಿಡತೊಡಗಿದೆ.

ಯಾವಾಗ ನಾನು ಮಾಹಿತಿ ಹಕ್ಕಿನ ಅನ್ವಯ ಅರ್ಜಿಹಾಕಿದೆನೋ ಪುರಸಭೆಯ ಕೊಟ್ರೇಶಚಾರ್‍ಯನ ಮಾತಿನ ಧಾಟಿಯೆ ಬದಲಾಯಿತು. ಎಲ್ಲಿ ತಾನು ಶಹಾಪುರ ಪುರಸಭೆಯಲ್ಲಿ ಮಾಡಿದ ಜಾತಕದ ಫಲಕ ನನಗೆ ದೊರಕಿಯೆ ಹೊಗುತ್ತದಲ್ಲ ಎಂದು ಕೈಕೈ ಹಿಸುಕಿಕೊಂಡ. ಮಾಹಿತಿ ಹಕ್ಕಿನ ಅನ್ವಯ ಎಲ್ಲಾ ವಿವರ ಮಾಹಿತಿ ಕೊಡಲು ೪೮೦೦.೦೦ ರೂಪಾಯಿಗಳಾಗುತ್ತವೆ ಎಂದು ಬುಕಾಟೆ ಮಾತುಗಳನ್ನೂ ಬರೆದು ಕಳಿಸಿದ.ಯಾವಾಗ ನಾನು ಇದೆಲ್ಲಕ್ಕೂ ಮಣಿಯುವ ಆಸಾಮಿ ಅಲ್ಲ ಎಂದು ಗೊತ್ತಾಯಿತೋ ಆಗ ಮಾತ್ರ ಅಂಡುಸುಟ್ಟ ಬೆಕ್ಕಿನಂತೆ ಎಲ್ಲಾ ಮಾಹಿತಿಗಳನ್ನು ಒದಗಿಸಿದ.

ಇದೇನೆ ಇರಲಿ : ದರ್ಶನಾಪುರ ಅ್ಯಂಡ ಪಟಾಲಂ ಅಧಿಕಾರ ನಡೆಸುತ್ತಿರುವ ಪುರಸಭೆಯನ್ನು ಹೊಕ್ಕು ನೋಡುವುದೊತ್ತಟ್ಟಿಗಿರಲಿ , ಅದರ ಸಮೀಪ ಸುಳಿಯುತ್ತಿರುವಂತೆ ಗಬ್ಬುನಾತ ಹೊಡೆಯುತೊಡಗುತ್ತದೆ. ಶಹಾಪುರದ ಪಟ್ಟಣದ ಜನತೆಯೆ ಕೊಡುವ ಖಾತಾ ವರ್ಗಾವಣೆ , ಕಟ್ಟಡ ಪರವಾನಿಗೆ ಪತ್ರ , ಜನನ ಪ್ರಮಾಣ ಪತ್ರ, ಅಭಿವೃದ್ಧಿ ಫೀ, ಖಾತಾ ನಕಲು , ಲೈಸನ್ಸ ಫೀ, ಆಸ್ತಿ ತೆರಿಗೆ, ನೀರಿನ ಫೀ ಮುಂತಾದ ಇತರೆ ಸಂಪನ್ಮೂಲಗಳಿಂದ ಬಂದ ತೆರಿಗೆಯ ಹಣದಲ್ಲಿ ಇಲ್ಲಿನ ಸದಸ್ಯರು ಹಾಗೂ ಅಧಿಕಾರಿಗಳೆಂಬ ನಾಮರ್ಧರು ಎಷ್ಟೆಲ್ಲ ತಿಂದು ಹಾಕಿದ್ದಾರೆ ? ಎಂಬುದನ್ನು ಖಚಿತವಾದ ದಾಖಲೆಗಳನ್ನು ಆಧರಿಸಿ ಈ ಮುಂದಿನ ಪುಟಗಳಲ್ಲಿ ಕೋಷ್ಟಕ ರೂಪದಲ್ಲಿ ವಿವರಣೆ ನೀಡಲಾಗಿದೆ.

ಇದು ಕೇವಲ ೨೦೦೮ ರ ಏಪ್ರಿಲ್ ತಿಂಗಳಿಂದ ಡಿಸೆಂಬರ್ ೨೦೦೮ ರವರೆಗಿನ ಪ್ರಮುಖ ಖರ್ಚುಗಳು ಮಾತ್ರವಾಗಿದೆ. ರಾಜ್ಯ ಸರಕಾರ ಪುರಸಭೆಗೆ ಕೊಡಮಾಡುವ ಫೈನಾನ್ಸ ಕಾರ್ಪೊರೇಷನ್, ವಿಶೇಷ ಅನುಧಾನ, ರೋಡ್ಸ್ ಮತ್ತು ಬ್ರಿಡ್ಜ ಅನುದಾನ ಹಾಗೂ ೧೨ ನೇ

ಹಣಕಾಸು ಆಯೋಗ ಮುಂತಾದ ಬಾಬತ್ತುಗಳಿಂದ ಬಂದ ಹಣದ ವಿವರವಾದ ಖರ್ಚನ್ನು ಮುಂದಿನ ಸಂಚಿಕೆಗಳಲಿ ಸವಿವರವಾಗಿ ನೋಡೋಣ.

ಈ ಕೋಷ್ಟಗಳನ್ನು ಸರಿಯಾಗಿ ಪರಿಶೀಲಿಸಿ ನೀವೆಲ್ಲ ನಿಮ್ಮ ಎಕ್ಕಡಗಳೊಂದಿಗೆ ಪುರಸಭೆಗೆ ಧಾವಿಸಿ ಬರದೆ ಹೋದರೆ ಅವರೆಲ್ಲ ಇಷ್ಟರಲ್ಲಿ ನಿಮ್ಮ ಮನೆ ಮನೆಗೂ ಬಂದು ನಿಮ್ಮ ಜೇಬುಗಳನ್ನೇ ಜಪ್ತಿ ಮಾಡಿಕೊಂಡು ಹೋಗುವ ದಿನಗಳು ದೂರವಿಲ್ಲವೆನಿಸುತ್ತದೆ ! ಪುರಸಭೆಯಲ್ಲಿಯ ಹೆಗ್ಗಣಗಳು ತಿಂದಿರುವ ಪರಿ ನೋಡಿದರೆ ಸಹಜವಾಗಿಯೆ ಈ ರೀತಿಯ ಸಿಟ್ಟು ಬರುತ್ತದೆ. ಬಹುಶಃ ಈಗ ಖರ್ಚು ತೋರಿಸಿರುವ ಕೆಲಸಗಳೆಲ್ಲ ಸಮರ್ಪಕವಾಗಿ ಪುರಸಭೆಯವರು ಮಾಡಿದ್ದೆ ಆಗಿದ್ದರೆ ಶಹಾಪುರ ಎಲ್ಲಾ ತಾಲೂಕು ಕೇಂದ್ರಗಳಿಗಿಂತಲೂ ಸುಂದರ – ಸ್ವಚ್ಛ ನಗರವಾಗಿ ಕಂಗೊಳಿಸುತ್ತಿತ್ತು.

ಆದರೆ ಶಹಾಪುರ ಪಟ್ಟಣದ ಎಲ್ಲೂ ಸಮರ್ಪಕ ಕಾಮಗಾರಿ ನಿರ್ವಹಿಸದೆ ಎಲ್ಲಾ ಕಡೆ ಗಬ್ಬು ನಾರುವ ನರಕಗಳಲ್ಲಿ ಶಹಾಪುರ ಪುರಸಭೆಯೂ ಒಂದಾಗಿದೆ.

## ನೈರ್ಮಲ್ಯ ಕೆಲಸದ ದಿನಗೂಲಿಗಾಗಿ ಮಾಡಿದ ಖರ್ಚು

| ವಿವರ | ದಿನಾಂಕ | ಖರ್ಚುಮಾಡಿದ ಹಣ |
|---|---|---|
| ೧. ಕಸ ವಿಲೇವಾರಿಗಾಗಿ | 4-4-2008 | 26593.00 |
| ೨. ೨೦ ಜನ ದಿನಗೂಲಿಗಳಿಗೆ | 4-8-2008 | 50000.00 |
| ೩. ದಿನಗೂಲಿ ವೇತನ | 16-4-2008 | 27390.00 |
| ೪. ಟ್ರ್ಯಾಕ್ಟರ್ ಬಾಡಿಗೆ | 27-4-2008 | 10368.00 |
| ೫. ದಿನಗೂಲಿ ವೇತನ | 26-6-2008 | 49800.00 |
| ೬. ದಿನಗೂಲಿ ವೇತನ | 4-8-2008 | 50000.00 |
| ೭. ಮೋಚಿಗಡ್ಡಿಯ ಕಸ ಸಾಗಿಸಲು | 8-9-2008 | 3600.00 |
| ೮. ದಿನಗೂಲಿ ವೇತನ | 17-9-2008 | 50000.00 |
| ೯. ಟ್ರ್ಯಾಕ್ಟರ್ ಬಾಡಿಗೆ | 17-9-2008 | 20176.00 |
| ೧೦. ದಿನಗೂಲಿ ವೇತನ | 17-9-2008 | 41832.00 |
| ೧೧. ದಿನಗೂಲಿ ವೇತನ | 17-9-2008 | 30000.00 |
| ೧೨. ಟ್ರ್ಯಾಕ್ಟರ ದುರಸ್ತಿ | 25-9-2008 | 10500.00 |
| ೧೩. ದಿನಗೂಲಿ ವೇತನ | 11-12-2008 | 41168.00 |
| ೧೪. ದಿನಗೂಲಿ ವೇತನ | 19-11-2008 | 15000.00 |
| ೧೫. ದಿನಗೂಲಿ ವೇತನ | 19-11-2008 | 48970.00 |
| | | 4,75,397.00 |

## ಶಾಸಕನ ಸನ್ಮಾನಕ್ಕಾಗಿ ಆದ ಖರ್ಚು



ಶಹಾಪುರ ಪಟ್ಟಣ ಅಭಿವೃದ್ಧಿಯ ಹರಿಕಾರ ಎಂದು ತನ್ನ ಬಾಲಂಗೋಚಿಗಳಿಂದ ಕರೆಸಿಕೊಂಡಿರುವ ಶಾಸಕ ಶರಣಬಸ್ಸಪ್ಪ ದರ್ಶನಾಪುರ ತನ್ನ ಸನ್ಮಾನಕ್ಕಾಗಿ (ಪುರಸಭೆಯ ವತಿಯಿಂದ ನಡೆದ ಸನ್ಮಾನ ಕಾರ್ಯಕ್ರಮಕ್ಕೆ) ಶಹಾಪುರ ನಾಗರಿಕರ ಜೇಬಿನಿಂದ ಕಸಿದುಕೊಂಡಿರುವ ಹಣದ ವಿವರ :

| ಕ್ರ.ಸಂ. | ವಿವರ | ದಿನಾಂಕ | ಖರ್ಚಾದ ಹಣ |
|---|---|---|---|
| ೧ | ಪ್ರಜಾವಾಣಿಯ ಪ್ರಕಟಣೆಗಾಗಿ | 7-7-2008 | 12880.00 |
| ೨ | ಕಾಮಗಾರಿಯ ಉದ್ಘಾಟನೆಗಾಗಿ | 30-8-2008 | 40000.00 |
| ೩ | ಶಾಸಕರ ಸನ್ಮಾನದ ಖರ್ಚು | 11-6-2008 | 100000.00 |
| ೪ | ಶಾಸಕರ ಸನ್ಮಾನದ ಖರ್ಚು | 21-6-2008 | 40000.00 |
| ೫ | ಸನ್ಮಾನದ ಆಮಂತ್ರಣ ಪತ್ರಿಕೆಗೆ | 21-6-2008 | 23000.00 |
| ೬ | ಸಂಯುಕ್ತ ಕರ್ನಾಟಕದ ಪ್ರಟಣೆ | 21-6-2008 | 20000.00 |
| ೭ | ಡೆಕ್ಕನ್ ಪತ್ರಿಕೆ ಪ್ರಕಟಣೆ | 21-6-2008 | 5000.00 |
| | ಖರ್ಚಾದ ಒಟ್ಟು ಹಣ | | 2,40,880.00 |

## ಮರಮ್ ಹೆಸರಿನಲ್ಲಿ ಖರ್ಚುಹಾಕಿ ತಿಂದ ಅಮೇಧ್ಯ !

ಬಹುಶಃ ಪಟ್ಟಣದಲ್ಲಿ ಕೇವಲ ಒಂಭತ್ತು ತಿಂಗಳಲ್ಲಿ ಹಾಕಿರುವ ಮರಮ್ಮಿನ ಖರ್ಚು ನೋಡಿದರೆ ಶಹಾಪುರ ತುಂಬೆಲ್ಲ ಕೆಂಪಾದ ಮಣ್ಣು ಗೋಚರವಾಗಬೇಕಿತ್ತು. ಆದರೆ ಎಲ್ಲೂ ಕೆಂಪು ಕಾಣುತ್ತಿಲ್ಲ. ಬರೀ ದೂಸು ದುಮ್ಮು ಎದ್ದು ಒಬ್ಬರ ಮುಖ ಮತ್ತೊಬ್ಬರಿಗೆ ಕಾಣದಷ್ಟು ದಟ್ಟ ಧೂಳು ಊರೆಲ್ಲ ವ್ಯಾಪಿಸಿಕೊಂಡಿದೆ.

ತಮಾಷೆ ಅಂದರೆ ಹತ್ತು ಟ್ರಿಪ್ ಟ್ರ್ಯಾಕ್ಟರ್ ಮರಮ್ ಹಾಕಿದರೆ ನೂರು ಟ್ರಿಪ್ ಮರಮ್ ಎಂದು ಬರೆಯಿಸಿಕೊಂಡು ಎತ್ತಿನ ಬಿಲ್ ನಿಜಕ್ಕೂ ಶಹಾಪುರ ನಗರದ ನಿವಾಸಿಯ ಜೇಬಿಗೆ ಹೊಡೆದ ಬಾಣದಂತಿದೆ.

ಇದರಲ್ಲಿ ಟ್ರ್ಯಾಕ್ಟರ್ ಮಾಲೀಕ, ನೈರ್ಮಲ್ಯ ನಿರೀಕ್ಷಕ, ಬಿಲ್ ಪಾಸು ಮಾಡುವ ಅಧಿಕಾರಿ ಹಾಗೂ ನೀವೇ ಗೆಲ್ಲಿಸಿ ಕಳಿಸಿದ ಪುರಸಭೆಯ ಸದಸ್ಯನೂ ಶಾಮೀಲಾಗಿದ್ದಾನೆ, ಜೊತೆಗೆ ಪುರಸಭೆಯ ಮುಖ್ಯಾಧಿಕಾರಿಯ ಜೇಬಿಗೂ ಇಂತಿಷ್ಟು ಹಣ ಪಾವತಿಯಾಗಿದೆ.

# ಮರಮ್‌ನಲ್ಲಿ ತಿಂದ ಅಮೇಧ್ಯ

| ವಿವರ | ದಿನಾಂಕ | ಖರ್ಚುಮಾಡಿದ ಹಣ |
|---|---|---|
| ೧. ವಿವಿಧ ಬಡಾವಣೆಯಲ್ಲಿ | 17-6-2008 | 8750.00 |
| ೨. ಮರೆಮ್ಮನ ಗುಡಿ ಹತ್ತಿರ | 9-5-2008 | 1800.00 |
| ೩. ಭೀಮರಾಯಬಾರಿಗಿಡದ ಮನೆ | 9-5-2008 | 2400.00 |
| ೪. ಗುತ್ತಿಪೇಟ ಮರೆಮ್ಮ ಗುಡಿಯಹತ್ತಿರ | 3-6-2008 | 7200.00 |
| ೫. ಡಿಗ್ರಿ ಕಾಲೇಜ ಹತ್ತಿರ | 3-6-2008 | 4800.00 |
| ೬. ವಾರ್ಡ ನಂ ೧೧ | 26-6-2008 | 6000.00 |
| ೭. ಹಳಿಸಗರ ರಸ್ತೆ ಪಕ್ಕದಲ್ಲಿ | 23-7-2008 | 30000.00 |
| ೮. ವಾರ್ಡ ೬ ರಲ್ಲಿ | 30-7-2008 | 12000.00 |
| ೯. ಹಳಿಸಗರದಲ್ಲಿ | 30-7-2008 | 15042.00 |
| ೧೦. ದಿಗ್ಗಿಬೇಸ್ ಹತ್ತಿರ | 26-8-2008 | 4000.00 |
| ೧೧. ವಾರ್ಡ ನಂ ೧೮ & ೧೧ರಲ್ಲಿ | 26-8-2008 | 4800.00 |
| ೧೨. ವಾ.ನಂ.೭,೮& ೧೯ ರಲ್ಲಿ | 26-8-2008 | 3000.00 |
| ೧೩. ತಹಶೀಲ ಕಾರ್ಯಲದಲ್ಲಿ | 12-8-2008 | 1992.00 |
| ೧೪. ವಾ.ನಂ.೬ ಮತ್ತು ೧೪ ರಲ್ಲಿ | 26-8-2008 | 30000.00 |
| ೧೫. ವಾರ್ಡ ನಂ ೨ ರಲ್ಲಿ | 8-12-2008 | 8913.00 |
| ೧೬. ಯಂಕಪ್ಪನ ಮನೆ ಹತ್ತಿರ | 8-12-2008 | 9096.00 |
| ೧೭. ಆಶ್ರಯ ಕಾಲೋನಿಯಲ್ಲಿ | 27-12-2008 | 4225.00 |
| ೧೮. ವಾರ್ಡ ನಂ. ೨೧ ರಲ್ಲಿ | 27-12-2008 | 8252.00 |
| ೧೯. ವಿದ್ಯಾನಗರದಲ್ಲಿ | 27-12-2008 | 4784.00 |
| ೨೦. ೨೨ ವಾರ್ಡ ನಲ್ಲಿ | 8-9-2008 | 27120.00 |
| ೨೧. ವಾರ್ಡ ನಂ ೭ ರಲ್ಲಿ | 18-10-2008 | 6000.00 |
| ೨೨. ಆಗಸ್ಟ ಸ್ವಾತಂತ್ರೋತ್ಸವಕ್ಕೆ | 15-8-2008 | 7500.00 |
| ೨೩. ಜೆ.ಕೆ. ಚಂದ್ರಶೇಖರ ಮನೆಯ ಹತ್ತಿರ | 16-10-208 | 5006.00 |
| ೨೪. ವಾರ್ಡ ನಂ.೨೦ ರಲ್ಲಿ | 13-11-2008 | 7791.00 |
| ೨೫. ಪೋಲಿಸ್ ಠಾಣೆಯ ಹತ್ತಿರ | 3-12-2008 | 5410.00 |
| ೨೬. ವಾರ್ಡ ನಂ. ೨೨ ರಲ್ಲಿ | 3-12-2008 | 8825.00 |
| ೨೭ ವಾರ್ಡ ನಂ ೨೨ ರಲ್ಲಿ | 3-12-2008 | 9093.00 |
| | ಖರ್ಚಾದ ಒಟ್ಟು ಹಣ | 2,44,699.00 |

# ಈ ಖರ್ಚುಗಳೆಲ್ಲ ಅನಿವಾರ್ಯವೆ ?

ಶಹಾಪುರ ಪಟ್ಟದಲ್ಲಿ ಯಾರಾದರೂ ಪ್ರತ್ಯೇಕ ದಿನಾಚರಣೆ ಆಚರಿಸುತ್ತಾರೋ ಇಲ್ಲವೊ ಗೊತ್ತಿಲ್ಲ. ಆದರೆ ಪಾಪ ಪುರಸಭೆಯವರೂ ಮಾತ್ರ ಯಾರಿಗೂ ಕರೆಯದೆ ತಾವೇ ತಾವು ಕೆಲವು ದಿನಾಚರಣೆಗಳನ್ನು ಆಚರಿಸಿಕೊಳ್ಳುತ್ತಾರೆ.

ಈ ನೆಪದಲ್ಲಿ ನಿಮ್ಮೆಲ್ಲರ ಟ್ಯಾಕ್ಸನ್ನು ಹೇಗೆ ಅಂದಾದುಂದಿಯಾಗಿ ಖರ್ಚಾಗುತ್ತದೆ, ಸ್ವಲ್ಪ ಪರಾಂಭರಿಸಿನೋಡಿರಿ.

## ಜಯಂತಿಗಳನ್ನು ಆಚರಣೆಗಾಗಿ ಮಾಡಿದ ಬ್ಲೇಡ್

| ವಿವರ | ದಿನಾಂಕ | ಖರ್ಚುಮಾಡಿದ ಹಣ |
|---|---|---|
| ೧. ಸ್ವಾತಂತ್ರೋತ್ಸವ ದಿನಾಚರಣೆಗೆ | 29-8-2008 | 9989.00 |
| ೨. ಚರಬಸವೇಶ್ವರ ಜಾತ್ರೆಗೆ | 15-4-2008 | 10000.00 |
| ೩. ಜಾತ್ರೆಯ ಕಾರ್ಯಕ್ರಮಕ್ಕೆ | 6-5-2008 | 10900.00 |
| ೪. ಶರಣಬಸವೇಶ್ವರ ಜಾತ್ರೆಗೆ | 6-5-2008 | 2400.00 |
| ೫. ಬಸವ ಜಯಂತಿ ಉತ್ಸವಕ್ಕೆ | 25-4-2008 | 5000.00 |
| ೬. ಬಾಬು ಜಯಜೀವನರಾಮ | - | 4700.00 |
| ೭. ಬಸವ ಜಯಂತಿಗೆ | - | 730.00 |
| ೮. ಹಿಂಗೂಲಾಂಬಿಕಾ | - | 700.00 |
| ಮಹೋತ್ಸವ | 8-12-2008 | 6040.00 |
| ೯. ಕನಕ ಜಯಂತಿಗೆ | - | 9832.00 |
| ೧೦. ಕರ್ನಾಟಕ ರಾಜ್ಯೋತ್ಸವಕ್ಕೆ | 29-12-2008 | 1000.00 |
| ೧೧. ರಮಜಾನ್ ಹಬ್ಬ, ದಸರಾ | - | 580.00 |
| ೧೨. ಗಾಂಧಿ ಜಯಂತಿಗೆ | - | 5000.00 |
| ೧೩. ಶರಣು ಗದ್ದುಗೆಗೆ | - | 5000.00 |
| ೧೪. ಕರ್ನಾಟಕ ರಾಜ್ಯೋತ್ಸವಕ್ಕೆ | - | 9000.00 |
| ೧೫. ದೀಪಾವಳಿ ಶುಭಾಷಯಕ್ಕೆ | - | 9715.00 |
| ೧೬. ಹೈದ್ರಾಬಾದ್ ಕರ್ನಾಟಕ ವಿಮೋಚನೆ ದಿನಚರಣೆಗೆ | - | |
| | | 1,18,486.00 |



**ಸರಾಫ ಬಜಾರ ಉದ್ಘಾಟನೆ ಖರ್ಚು** — 30000.00

## ಜಂಗಲ್ ಹೆಸರಿನಲ್ಲಿ ಪುರಸಭೆಯ ಹಜಾಮತಿ ?

ಜಂಗಲ್ ಕಟಿಂಗ್ ಹೆಸರಿನ ಮೇಲೆ ಪುರಸಭೆಯವರು ಈಗಾಗಲೇ ಖರ್ಚು ಮಾಡಿದ ಹಣವನ್ನು ಗಮನಿಸಬೇಕಾದರೆ ನಮ್ಮ ಊರಿನ ಯಾವುದೇ ಮೂಲೆಯಲ್ಲಿ ಒಂದಾನೊಂದು ಕಂಟಿ ಜಾಲಿ ಇರಬಾರದು. ಈ ಪುರಸಭೆಯವರು ಎಂಥ ಪಾಕಡಾ ಆಸಾಮಿಗಳೆಂದರೆ ಜಾಲಿ ಇಲ್ಲದ ಕಡೆಗೂ ಜಂಗಲ್ ಕಟಿಂಗ್ ಹೆಸರಿನ ಮೇಲೆ ಬಿಲ್ ಜಡಿಯುತ್ತಾರೆ. ಉದಾಹರಣೆಗೆ ಹೇಳಬೇಕೆಂದರೆ ಶಾಸಕರ ಕಛೇರಿಯ ಮುಂದುಗಡೆ ಖಾಲಿ ಜಾಗದಲ್ಲಿ ಜಾಲಿ ಬೆಳೆದಿದ್ದವಂತೆ , ಅವನ್ನೂ ಕೂಡ ಇವರು ತೆಗೆದುಹಾಕಿದ್ದಾರೆ.

## ಜಂಗಲ್ ಕಟಿಂಗ್ ಹೆಸರಿನಲ್ಲಿ ಮಾಡಿದ ವಂಚನೆ

| ವಿವರ | ದಿನಾಂಕ | ಖರ್ಚುಮಾಡಿದ ಹಣ |
|---|---|---|
| ೧. ಹಳಿಸಗರ ಸ್ಮಶಾನ ಭೂಮಿಯಲ್ಲಿ | 22-4-2008 | 10000.00 |
| ೨. ಗುತ್ತೀಪೇಟೆ ರುದ್ರಭೂಮಿಗೆ | 24-4-2008 | 8275.00 |
| ೩. ಕೋರ್ಟ ಹತ್ತಿರದ ಜಾಲಿಗೆ | 09-5-2008 | 5325.00 |
| ೪. ಕೋರ್ಟ ಹತ್ತಿರದ ಕಟಿಂಗ್ | 17-5-2008 | 4500.0 |
| ೫. ಶಾಸಕರ ಭವನದ ಹತ್ತಿರ | 26-8--2008 | 1216.00 |
| ೬. ವಾರ್ಡ ೧ ರಲ್ಲಿ | - | 6300.00 |
| ೭. ಸವಿತಾ ಸ.ಕಲ್ಯಾಣ ಮಂಟಪ | - | 9190.00 |
| ೮. ಟಂಕಸಾಲೆ ಹತ್ತಿರ | - | 6557.00 |
| ೯. ಗುತ್ತಿಪೇಟೆ ರುದ್ರಭೂಮಿಗೆ | - | 6426.00 |
| ೧೦. ಈರಣ್ಣ ಕಾಮಾ ಮನೆ ಹತ್ತಿರ | 27-12-2008 | 9399.00 |
| ೧೧. ಜಾಲಿ ಕಟಿಂಗ್ (ಸ್ಥಳ ಇಲ್ಲ) | 13-10-2008 | 6689.00 |
| ೧೨. ಜಾಲಿ ಕಟಿಂಗ್ (ಸ್ಥಳ ಇಲ್ಲ) | 14-10-2008 | 5000.00 |
| ೧೩. ಜಾಲಿ ಕಟಿಂಗ್ (ಸ್ಥಳ ಇಲ್ಲ) | 14-10-2008 | 8131.00 |
| ೧೪. ಮಂಡಾಳ ಭಟ್ಟಿ ಹತ್ತಿರ | 16-10-2008 | 7805.00 |
| ೧೫. ವಾರ್ಡ ನಂ.೧೬ ರಲ್ಲಿ | 16-10-2008 | 5068.00 |
| ೧೬. ವಾ.ನಂ.೧,೨,೨೨ ರಲ್ಲಿ | 29-12-2008 | 30000.00 |
| ೧೭ ವಾರ್ಡ ನಂ. ೧೬ ರಲ್ಲಿ | 29-12-2008 | 6298.00 |
| | | 1,33,179.00 |

| | | |
|---|---|---|
| ಇದು ಕೇವಲ ಗೆಳೆತನದಿಂದ ಆಗುವ ಕೆಲಸಕ್ಕೆ ಹಾಕಿದ ಖರ್ಚು | ಕಂಪ್ಯೂಟರ್‌ಗೆ ಎಂಟಿ ವೈರಸ್ ಅಳವಡಿಕೆಗೆ | 6964.00 |

# ಕರೆಂಟ್ ಹೊಡೆಯುವ ವಿದ್ಯುತ್ ಸಾಮಗ್ರಿ ಬಿಲ್‌ಗಳು



ರಾತ್ರಿ ಆಯ್ತೆಂದರೆ ಸಾಕು ಸರಕಾರದ ಲೋಡ್ ಶೆಡಿಂಗ್ ಒಂದು ಕಡೆಯಾದರೆ, ಸ್ಥಳೀಯ ಪುರಸಭೆಯವರ ಕಾರ್ಯವೈಖರಿಯಿಂದ ಕತ್ತಲಾಗಿರುವ ಎಷ್ಟೋ ವಾರ್ಡಗಳು ನಮ್ಮ ಪಟ್ಟಣದಲ್ಲಿವೆ. ಆದರೆ ಪುರಸಭೆಯವರು ಲೈಟ್ ಗಳಿಗಾಗಿ ಅದರ ದುರಸ್ಥಿಗಾಗಿ ಹಾಕಿದ ಖರ್ಚಿನ ಲೆಕ್ಕ ನೋಡಿದರೆ ಯಾರಿಗಾದರೂ ಕರೆಂಟ್ ಹೊಡೆಯುತ್ತದೆ.

| ವಿವರ | ದಿನಾಂಕ | ಖರ್ಚುಮಾಡಿದ ಹಣ |
|---|---|---|
| ೧. ವಿದ್ಯುತ್ ಸಾಮಗ್ರಿ ಖರೀದಿ | 03-5-2008 | 1,13,073.00 |
| ೨. ವಿದ್ಯುತ್ ಸಾಮಗ್ರಿ ಖರೀದಿ | 05-5-2008 | 80,710.00 |
| ೩. ವಿದ್ಯುತ್ ಸಾಮಗ್ರಿ ಖರೀದಿ ( ರವಿ ಎಲೆಕ್ಟ್ರೀಕಲ್ ) | 16-4-2008 | 20,095.00 |
| ೪. ವಿದ್ಯುತ್ ಸಾಮಗ್ರಿ ಖರೀದಿ ( ಜನತಾ ಬಜಾರ ಗುಲ್ಬರ್ಗಾ) | 21-6-2008 | 90,000.00 |
| ೫. ವಿದ್ಯುತ್ ಸಾಮಗ್ರಿ ಖರೀದಿ | 27-8-2008 | 1942.00 |
| ೬. ವಿದ್ಯುತ್ ಸಾಮಗ್ರಿ ಖರೀದಿ | 07-7-2008 | 64,896.00 |
| ೭. ವಿದ್ಯುತ್ ಸಾಮಗ್ರಿ ಖರೀದಿ | 03-12-2008 | 36,456.00 |
| ೮. ವಿದ್ಯುತ್ ಸಾಮಗ್ರಿ ಖರೀದಿ | 10-2-2008 | 1,18,950.00 |
| ೯. ವಿದ್ಯುತ್ ಸಾಮಗ್ರಿ ಖರೀದಿ | 10-2-2008 | 5000.00 |
| ೧೦. ವಿದ್ಯುತ್ ಸಾಮಗ್ರಿ ಖರೀದಿ | 10-2-2008 | 5000.00 |
| | | 5,36,422.00 |

| | | |
|---|---|---|
| ಶಾಸಕರು ಕಛೇರಿಗೆ ಭೇಟಿ ಕೊಟ್ಟಾಗ ಹಾಗೂ ಇತರ ಸಂದರ್ಭಗಳಲ್ಲಿ ಶಹಾಪುರದ ಜನತೆಯನ್ನು ಸುಲಿದು ಗೂಳೆ ಮಾಡಿದ ಹಣದಲ್ಲಿ ಕೇವಲ ಒಂಭತ್ತು ತಿಂಗಳ ಅವಧಿಯಲ್ಲಿ ಪುರಸಭೆಯಲ್ಲಿ ಕುಂತು ತಿಂದ ನಾಷ್ಟಾದ ಒಟ್ಟು ಬಿಲ್ | 6-5-2008 - ರಿಂದ 24-10-2008 ರವರೆಗೆ ಮಾತ್ರ | 33,923.00 |

**ತೆರಿಗೆ ಹಣ ಯಾರದೊ ?**

**ಮಜಾ ಇನ್ನಾರದೋ ?**

# ದಯೆಯ ಗುಣ ಆನಂದವನ್ನು ತುಂಬುತ್ತದೆ



ಹರಳು ಹುರಿದಂತೆ ಸ್ಪಷ್ಟ ಮಾತು.ಯಾರಪ್ಪನಿಗೆ ಸಿಟ್ಟು ಬಂದರೂ ಸೈ ಇದ್ದುದ್ದನ್ನು ಇದ್ದಂತೆ ಹೇಳುವ ಗುಣ. ಕಾಣಿಯಸೋಲ ಅರ್ಧಗಾಣಿಯ ಗೆಲ್ಲ ಎಂಬ ಮನೋಭಾವ.

ಜೀವನವನ್ನು ಸಂಪೂರ್ಣ ಸವೆಯೆ ಬಳಸಬೇಕೆಂಬ ತುಡಿತದ ಪಾಪು ಅವರಂಥವ ಮಾತು ನಮ್ಮ ಬದುಕಿಗೆ ಒಂದು ಬೆಳಕು.

ದಯಾ ಗುಣವನ್ನು ಬೆಳೆಸಿಕೊಳ್ಳುವುದೇ ಜೀವನದ ಬಹು ಮುಖ್ಯ ಭಾಗವಾಗಿದೆ. ದಯೆಯಿಂದ ತುಂಬಿದ ಹೃದಯವು ಆನಂದವನ್ನು ಚಿಮ್ಮುವ ಕಾರಂಜಿ ಎನಿಸಿದೆ. ಅದು ಎಲ್ಲೆಡೆಗಳಲ್ಲಿಯೂ ಸಮಾಧಾನವನ್ನು ತರುತ್ತದೆ. ಮುಖದಲ್ಲಿ ಮುಗುಳುನಗೆಯನ್ನು ಅರಳಿಸುತ್ತದೆ.

ದೇಶದಲ್ಲಿ ಜನರು ದಯೆಗೆ ವಿಧೇಯರಾಗಿ ನಡೆದುಕೊಂಡಿದ್ದರೆ ಸರಕಾರವೆನ್ನುವುದು ಇರಬೇಕಾದ ಅವಶ್ಯಕತೆಯೇ ಇರಲಾರದು.ದಯೆಯ ಆಳ್ವಿಕೆ ಇರುವಲ್ಲಿ , ಅನ್ಯಾಯಕ್ಕೆ ಅವಕಾಶವೇ ಇರುವುದಿಲ್ಲ.

ಜನರನ್ನು ನಾವು ದಯೆಯಿಂದ ಕಾಣಬಲ್ಲೆವಾದರೆ ನಾವಿರುವ ಜಗತ್ತೇ ಖಲಿಸುತ್ತದೆ. ವೈರಿಯನ್ನು ಕೊಲ್ಲುವುದಕ್ಕೆ ಶಸ್ತ್ರಾಸ್ತ್ರಬೇಕಾಗಿಲ್ಲ. ದಯೆಯೊಂದಿದ್ದರೆ ಸಾಕು. ನೀವು ಅವನಿಗೆ ದಯೆ ತೋರಿಸಿದರೆ ಅವನ ಸ್ವಭಾವವೇ ಬದಲಿಸುತ್ತದೆ. ಆಗ ಅವನು ವೈರಿಯಾಗಿ ಉಳಿಯುವುದಿಲ್ಲ. ಅವನೊಳಗಿನ ವೈರಿ ಸತ್ತು ಹೋಗಿರುತ್ತಾನೆ.

ಮನುಷ್ಯರನ್ನು ಗೆಲ್ಲಬೇಕಾದರೆ , ನಾವು ಅವರ ಹೃದಯಗಳನ್ನು ಹಿಡಿದುಕೊಳ್ಳಬೇಕು. ಅವರ ಹೃದಯಗಳನ್ನು ಹಿಡಿದುಕೊಳ್ಳುವುದಕ್ಕೆ ದಯೆ ಅಂತಃಕರಣಗಳು ಅಗತ್ಯ. ಹೃದಯವನ್ನು ಕೊಟ್ಟವರು ನಿಮಗೆ ಏನು ಬೇಕಾದರೂ ಕೊಡಲು ಸಿದ್ಧರಾಗುತ್ತಾರೆ.

ದಯೆಯೇ ಧರ್ಮದ ಮೂಲವೆಂದು ಬಸವೇಶ್ವರರು ಹೇಳಿದ್ದಾರೆ. ಎಲ್ಲ ಧರ್ಮಗಳ ಮೂಲದಲ್ಲಿ ದಯೆಯೇ ಇದೆ. ದಯೆ ಇಲ್ಲದಿದರೆ ಅದು ಧರ್ಮವೇ ಅಲ್ಲ. ಯಾವ ಧರ್ಮವನ್ನೇ ಆಚರಿಸಿದರೂ ದಯೆ ಇಲ್ಲದವನು ಮನುಷ್ಯನೆ ಅಲ್ಲ. ದಯೆಯಿಲ್ಲದವ ಯಾವನೊಬ್ಬನೂ ನ್ಯಾಯ ಬುದ್ಧಿಯಿಂದ ನಡೆದುಕೊಳ್ಳಲಾರ.

ಮನುಷ್ಯರಾದವರು ಒಬ್ಬರೊಬ್ಬರ ತೊಂದರೆಗಳನ್ನು ಕಡಿಮೆ ಆಗುವಂತೆ ನಡೆದುಕೊಳ್ಳಬೇಕು. ಇನ್ನೊಬ್ಬರ ಜೀವನವನ್ನು ಬದುಕುವಷ್ಟು ಸಹ್ಯಗೊಳಿಸದೇ ಹೋದರೆ ನಾವು ಬದುಕಿಯಾದರೂ ಏನು ಪ್ರಯೋಜನ ?

ದಯೆಯ ಮಾತು ಕೇವಲ ತುಟಿಯ ಮೇಲೆ ಇದ್ದರೆ ಸಾಲದು. ಅದು ಬಾಯಿ ಮಾತಿನಲ್ಲಿ ಇರುವಂತೆ ನಮ್ಮ ಕೃತಿಯಲ್ಲಿಯೂ ಇರಬೇಕು. ಜನರ ಮನಸ್ಸಿನಲ್ಲಿ ದಯೆಯ ಭಾವವು ತುಂಬಿಕೊಂಡರೆ , ಅವರ ಹೃದಯ ಆರ್ತರ ಕಡೆಗೆ ಹರಿಯುತ್ತದೆ. ಆಗ ಈ ಭೂಮಿಯ ಮೇಲೆ ಶಾಂತಿ ಸಮಾಧಾನಗಳ ರಾಜ್ಯ ಬರುತ್ತದೆ.




# ಮ.ಪಾ.ಯ ಜಂಗಿಕುಸ್ತಿಗೆ ಕಾರಣವೇನು ?

ಗುಲಬರ್ಗಾ ಮಹಾನಗರ ಪಾಲಿಗೆ ವಕ್ಕರಿಸಿದ ಮುಧೋಳ ಎಂಬ ಭ್ರಷ್ಟ ಕಮೀಷನರ್ ಹಾಗೂ ಆತನ ಜೊತೆಗೆ ಸಿಕ್ಕಾಪಟ್ಟೆ ಅಮೇಧ್ಯ ತಿಂದ ಇಂಜನಿಯರ್‌ಗಳೆಂದು ಹಂದಿಗಳು ಹೋದವು ಎಂದು ನಿಟ್ಟುಸಿರು ಬಿಡುವಷ್ಟರಲ್ಲಿ ಮಹಾನಗರ ಪಾಲಿಗೆ ಮತ್ತೆ ಸುದ್ದಿಯಲ್ಲಿದೆ. ಗುಲಬರ್ಗಾದಲ್ಲಿ ಮಹಾನಗರ ಪಾಲಿಕೆ ಅಸ್ತಿತ್ವಕ್ಕೆ ಬಂದ ತರುವಾಯ ಒಬ್ಬಾನೊಬ್ಬ ಐ.ಎ.ಎಸ್. ಅಧಿಕಾರಿ ಕಮೀಷನರ್ ಹುದ್ದೆಯಲ್ಲಿ ಬಂದು ಕುಳಿತಿರಲಿಲ್ಲ. ಇದುವರೆಗೆ ಇದ್ದವರು ಬಡ್ತಿ ಹೊಂದಿದ, ಪೌರಾಡಳಿತ ಸೇವೆಯ ಅಧಿಕಾರಿಗಳೆ ಕಮೀಷನರ್ ಆಗಿ ಬಂದಿದ್ದರು. ತೀರಾ ಇತ್ತೀಚೆಗೆ ಗುಲಬರ್ಗಾದ ಪ್ರಭಾರಿ ಜಿಲ್ಲಾಧಿಕಾರಿಯಾಗಿ ಕೆಲವು ತಿಂಗಳು ಕಾರ್ಯನಿರ್ವಹಿಸಿದ್ದ ಡಾ.ಕೆ.ಜಿ. ಜಗದೀಶ್ ಅವರೆ ಮಹಾನಗರ ಪಾಲಿಕೆಯ ಕಮೀಶನರ್ ಎಂದು ಸರಕಾರ ವರ್ಗಾವಣೆ ಮಾಡಿದಾಗ ಬಹಳಷ್ಟು ಜನತೆ ನೆಮ್ಮದಿಯ ನಿಟ್ಟುಸಿರು ಬಿಟ್ಟಿದ್ದರು.

ಸುಮಾರು ವರ್ಷಗಳಿಂದ ಮಹಾನಗರ ಪಾಲಿಕೆಯ ಜಡತ್ವವನ್ನು ಹಾಗೂ ಕೊಳೆಯನ್ನು ಹಂತ ಹಂತವಾಗಿ ಡಾ.ಕೆ.ಜಿ. ಜಗದೀಶ್ ಕಿತ್ತೊಗೆಯುತ್ತಾರೆ ಎಂಬ ನಂಬುಗೆಯಲ್ಲಿ ಜನತೆ ಇದ್ದರು. ಅವರ ನಂಬುಗೆಯೇನು ಹುಸಿಯಾಗಲಿಲ್ಲ. ಕೇಳುವವರೆ ಇಲ್ಲದೆ ಅಕ್ಷರಶಃ ಮಹಾನರಕಪಾಲಿಕೆಯಾಗಿದ್ದ ಮಹಾನಗರ ಪಾಲಿಕೆಗೆ ಕಳೆ ತುಂಬಿದ್ದೆ ಡಾ. ಜಗದೀಶ ಅವರಿಂದ. ಇಷ್ಟು ವರ್ಷಗಳ ಕಾಲ ಬೇಕಾಬಿಟ್ಟಿಯಾಗಿ ಹೆಸರಿಗೆ ಮಾತ್ರ ಮಹಾನಗರ ಪಾಲಿಕೆಯ ನೌಕರರಾಗಿದ್ದ ಬಹುತೇಕರು ತಮ್ಮ ಕುರ್ಚಿಯ ಮೇಲೆ ಕುಳಿತು ಕೆಲಸ ಮಾಡದೆ , ಸಂಬಳ ಮಾತ್ರ ತಪ್ಪದೆ ಪಡೆಯುತ್ತ ಕುಳಿತಿದ್ದರು. ಇಂಥವರೆಲ್ಲ ತಮ್ಮ ತಮ್ಮ ಹುದ್ದೆಯ ಕುರ್ಚಿಯ ಮೇಲೆ ಕುಳಿತದ್ದೆ ಡಾ. ಜಗದೀಶ್ ಬಂದ ತರುವಾಯ. ಕಛೇರಿಯಲ್ಲಿ ಜನ ಬಂದರೆ ಸಾಕು ಅವರನ್ನು ಮುಗಿಬಿದ್ದು ತಿಂದುಹಾಕುತ್ತಿದ್ದ ಬ್ರಹ್ಮಾಂಡಭ್ರಷ್ಟತೆಗೆ ಕಡಿವಾಣ ಹಾಕಿದರು.



ಡಾ.ಜಗದೀಶ್

ನರಕದ ಪ್ರತಿರೂಪವಾಗಿದ್ದ ನಗರದ ಬಡಾವಣೆಗಳಲ್ಲಿ ಮಹಾನಗರ ಪಾಲಿಕೆಯ ಕಸ ಗುಡಿಸುವವರು, ಕಸ ಸಾಗಿಸುವವರು ಮೊಟ್ಟ ಮೊದಲಬಾರಿಗೆ ಕಾಣಿಸಿಕೊಂಡರು. ಜನನ – ಮರಣ ಆನ್ ಲೈನ್ ಮಾಡಿದರು.ಜೊತೆಗೆ ನಾಲ್ಕು ವಲಯ ಕಛೇರಿ ಮಾಡಿ ಐವತ್ತೈದು ವಾರ್ಡ್‌ಗಳನ್ನು ವಿಭಜಿಸಿ ಆಯಾವಾರ್ಡ ಕೆಲಸಗಳನ್ನು ವಲಯ ಕಚೇರಿಗಳಿಗೆ ವಹಿಸಿಕೊಟ್ಟು ಪಾಲಿಕೆಯನ್ನು ಜನರ ಬಳಿಗೆ ಕೊಂಡೊಯ್ದರು. ಕಾಲೋನಿಯಲ್ಲಿ ಕೆಟ್ಟು ಕೆರಹಿಡಿದು ಹೋಗಿದ್ದ ಬಲ್ಬ್ – ಟ್ಯೂಬ್‌ಗಳು ಬೆಳಕುಬೀರತೊಡಗಿದವು. ಕೇವಲ ಪರ್ಸೆಂಟೇಜ್‌ಗಳಿಗಾಗಿ ಎಲ್ಲಾ ಕೆಲಸ ಮಾಡಿಕೊಡುತ್ತಿದ್ದ ಇಂಜನೀಯರ್‌ಗಳು ಎ.ಸಿ. ಕೊಠಡಿಬಿಟ್ಟು ಮೊಟ್ಟ ಮೊದಲು ನೆಲದ ಮೇಲೆ ನಡೆದಾಡಿ ಕಾಮಗಾರಿಯನ್ನು ಗಮನಿಸುವಂತಾದರು. ಕಂಟ್ರ್ಯಾಕ್ಟ್‌ದಾರರು ತಮ್ಮ ಮೂಲ ಕಂತ್ರಾಟ್‌ದಾರಿಕೆಯನ್ನು ಬಿಟ್ಟು ಕೆಲಸದ ಕಡೆ ನಿಗ ವಹಿಸತೊಡಗಿದರು. ಪಾಲಿಕೆಯ ಪರವಾನಿಗೆ ಇಲ್ಲದೆ ಸರಕಾರದ ಬೊಕ್ಕಸಕ್ಕೆ ಅಪಾರ ನಷ್ಟ ಉಂಟುಮಾಡುತ್ತಿದ್ದ ವ್ಯಾಪಾರಸ್ಥರು ಟ್ರೇಡ್ ಲೈಸನ್ಸ್ ನಗರಪಾಲಿಕೆಯಿಂದ ಪಡೆಯಬೇಕು ಎಂದು ಡಾ. ಜಗದೀಶ ಆಜ್ಞೆ ಹೊರಡಿಸಿದರು. ಇದು ಬಹುತೇಕ ವ್ಯಾಪಾರಸ್ಥರಿಗೆ ನುಂಗಲಾಗದ ಬಿಸಿ ತುಪ್ಪವಾಗಿ ಪರಿಣಮಿಸಿತು. ಶೇಕಡಾ ೯೮ ರಷ್ಟು ವ್ಯಾಪಾರಸ್ಥರಿಗೆ ಇದು ಚುರುಕು ಮುಟ್ಟಿಸಿದ ಆಜ್ಞೆಯಾಗಿತ್ತು. ಅವರೆಲ್ಲ ತಮ ತಮಗೆ ಬೇಕಿದ್ದ ಪಾಲಿಕೆಯ ಸದಸ್ಯರು, ಮೇಯರ್ ಸಯೀದಾಬೇಗಂ , ಉಪಮೇಯರ್ ಪ್ರಮೋದ ತಿವಾರಿಯ ಮೂಲಕ ಈ ಆಜ್ಞೆಯನ್ನು ಹಿಂದಕ್ಕೆ ಪಡೆಯುವಂತೆ ಒತ್ತಡ ಹೇರಿದರು. ಆದರೆ ಇದಕ್ಕೆಲ್ಲ ಡಾ.ಜಗದೀಶ ಜಗ್ಗಲಿಲ್ಲ. ಯಾರೆಷ್ಟೆ ಎಗರಾಡಿದರೂ ತಾವು ತೆಗೆದುಕೊಂಡ ನಿರ್ಣಯ ಕಾನೂನು ಬದ್ಧವಾಗಿದೆ. ಇದನ್ನು ಎಲ್ಲರೂ ಪಾಲಿಸಲೆ ಬೇಕೆಂದು ಮೂಗುದಾರ ಹಾಕಿಬಿಟ್ಟರು. ಈ ಸಂದರ್ಭದಲ್ಲಿ ಶಾಸಕ ಚಂದ್ರಶೇಖರ ಪಾಟೀಲ ರೇವೂರ ಕೂಡ ತನ್ನ ಕೈಚಳಕ ತೋರಿಸಿದ. ಆದೂ ಪ್ರಯೋಜನವಾಗಲಿಲ್ಲ. ಕೊನೆಗೆ ತಮ್ಮ ಆಟ ನಡೆಯದಾದಾಗ ಡಾ. ಕೆ.ಜಿ. ಜಗದೀಶ್ ಅವರಿಗೆ ವ್ಯಾಪಾರಸ್ಥರೆಲ್ಲ ಸೇರಿ ಘೇರಾವ ಕಾರ್ಯಕ್ರಮ ಹಾಕಿಕೊಳ್ಳಲು ಸಂಚು ರೂಪಿಸಿದರು. ಇಂಥ ಬುವ್ವಾಬಾಜಿಗಳಿಗೆ ಹೆದರದ ಜಗದೀಶ್ ಒಂದೆ ಮಂತ್ರ ಉಚ್ಚರಿಸಿದರು. ನಗರದ ಎಲ್ಲಾ ವಹಿವಾಟುಗಳು ಅಧಿಕೃತವಾಗಿಯೇ ಸಾಗಬೇಕು. ಅನಧಿಕೃತವಹಿವಾಟು ನಡೆಸುವವರ ಮೂಗುದಾರ ಹಾಕಿ ಸರಕಾರಕ್ಕೆ ಹಾಗೂ ಮಹಾನಗರ ಪಾಲಿಕೆಗೆ ಆದಾಯ ತಂದುಕೊಡುವುದೆ ತಮ್ಮ ಮೂಲ ಉದ್ದೇಶ ಎಂದಾಗ ಇವರೆಲ್ಲ ಅನಿವಾರ್ಯವಾಗಿ ತೆಪ್ಪಗಾಗಬೇಕಾಯಿತು. ಇದೆಲ್ಲ ಡಾ. ಕೆ.ಜಿ. ಜಗದೀಶ್ ಅವರ ಎಫೆಕ್ಟ್ ಅಂದರೆ ತಪ್ಪಾಗಲಾರದು.

ಇದರ ಜೊತೆ ಜೊತೆಗೆ ಡಾ. ಜಗದೀಶ್ ವಿನಯವಂತ ನಡವಳಿಕೆ ರೂಪಿಸಿಕೊಂಡಿದ್ದರೆ ಅದು ಅವರ ವ್ಯಕ್ತಿತ್ವಕ್ಕೊಂದು ಗರಿ ತಂದುಕೊಡುತ್ತಿತ್ತು. ನಾನು ಭ್ರಷ್ಟನಲ್ಲ, ಕೆಲಸಗಾರ, ಜನರಿಗಾಗಿ ಕೆಲಸ ಮಾಡುವ ಐ.ಎ.ಎಸ್. ಅಧಿಕಾರಿ ಎಂಬ ಹಮ್ಮು ಅವರ ತಲೆಗೆ ಹೊಕ್ಕುದೊಂದೆ ತಡ ತಾನು ಏನು ಹೇಳುತ್ತಾನೋ ಅದು ಆಗಲೇಬೇಕು ಎಂಬ ಧಾಟಿಯಲ್ಲಿ

ಮಾತಾಡತೊಡಗಿದರು. ಜನತೆಯಿಂದ ನೇರವಾಗಿ ಚುನಾಯಿತನಾಗಿ ಬಂದ ಪಾಲಿಕೆಯ ಸದಸ್ಯರು ಮೇಯರ್– ಉಪಮೇಯರ್‌ಗಳು ಕಮೀಷನರ್‌ರಿಗೆ ಭೇಟಿಯಾಗಬೇಕೆಂದರೆ ನಿಗದಿತ ಸಮಯದಲ್ಲಿ ಮಾತ್ರ ಭೇಟಿಯಾಗುವ ಅವಕಾಶ ಇತ್ತು. ಇದು ಮೇಲುನೋಟಕ್ಕೆ ಶಿಸ್ತು ಬದ್ಧ ನಿಯಮ ಅನ್ನಿಸಿದರೂ ಇದರೊಳಗೆ ದುರಂಹಕಾರದ ಹಾವು ಎಡೆ ಎತ್ತಿ ಬುಸುಗುಡುತ್ತಿತ್ತು. ಕಮೀಷನರರ ಈ ನಡವಳಿಕೆ ಬಹುತೇಕ ನಗರ ಪಾಲಿಕೆಯ ಸದಸ್ಯರಿಗೆ ರೇಜಿಗೆ ತಂದದ್ದು ಸುಳ್ಳಲ್ಲ. ಅವರೆಲ್ಲ ಕಮೀಷನರ್‌ರನ್ನು ಹೈರಾಣ ಮಾಡಬೇಕೆಂದು ಸಮಯಕ್ಕಾಗಿ ಹೊಂಚು ಹಾಕಿದ್ದರು.

(೨೩ ನೇ ಪುಟಕ್ಕೆ)



ಸದಾ ಒತ್ತಡದಲ್ಲಿ ಅಕಾಲ ವೃತ್ತಿಗಳಲ್ಲಿ ಪ್ರೀತಿ ವಿಶ್ವಾಸದ ಅತಿ ಮಧುರ ಸ್ನೇಹ ಸಂಬಂಧಗಳೆಲ್ಲಾ ಕಳೆದು ಹೋಗುತ್ತಿವೆ. ಹಣಬಿಟ್ಟರೆ ಅವರನ್ನು ನಿಜವಾಗಿ ಯಾರು ಪ್ರೀತಿಸುತ್ತಿಲ್ಲವೇನೋ ? ಅನ್ನುವ ಭಾವನೆ ಈಗ ಜನಗಳಲ್ಲಿ ಬೆಳೆದು ಬಿಟ್ಟಿದೆ ಇದೇ ಮಾನಸಿಕ ಅಸಂತೃಪ್ತಿಗೆ ಕಾರಣ.

# ಮನಸ್ಸನ್ನು ಸದಾ ಹತೋಟಿಯಲ್ಲಿಡಬೇಕು

ದೇವರ ಸೃಷ್ಟಿಯಲ್ಲಿ ಮನುಷ್ಯ ಒಂದು ಅದ್ಭುತ ಸೃಷ್ಟಿ. ಏಕೆಂದರೆ ಎಲ್ಲಾ ಪ್ರಾಣಿಗಳಲ್ಲಿ ಯಾವುದೋ ಒಂದು ಕೊರತೆ ಇದ್ದೇ ಇರುತ್ತದೆ. ಆದರೆ ದೇವರು ಮನುಷ್ಯ ಪಕ್ಷಪಾತಿ ಅವನಲ್ಲಿ ಎಲ್ಲಾ ಶಕ್ತಿಯನ್ನು ತುಂಬಿಸಿದ್ದಾನೆ. ಮನುಷ್ಯ ಆಡಬಲ್ಲ, ಆಡಿಸಬಲ್ಲ , ಹಾಡಿಸಲೂ ಬಲ್ಲ ಅಷ್ಟೆ ಅಲ್ಲ ದೇವರಂತೆ ಮರುಸೃಷ್ಠಿ ಮಾಡಬಲ್ಲ ! ಆದರೆ ದೇವರಂತೆ ಎಲ್ಲರನ್ನು ಕ್ಷಮಿಸಲಾರ. ಶಾಂತಿಯಿಂದ ಇರಲಾರ. ಇರಲು ಪ್ರಯತ್ನಿಸುವುದೂ ಇಲ್ಲ.



ನಾವು ಸ್ವಭಾವತಃ ಶಾಂತಿಪ್ರಿಯರು, ಒಳ್ಳೆಯವರು, ಆದಕ್ಕೆ ನಾವು ಅಶಾಂತಿಗೆ ಹೆದರುತ್ತೇವೆ. ಹಿಂಸೆಗೆ ಭಯಪಡುತ್ತೇವೆ ಅಲ್ವಾ ? ನಾವು ಯಾರೊಡನೆಯೂ ಜಗಳವಾಡುವುದಿಲ್ಲ. ನಾವೇನಾದರೂ ಜಗಳಗಂಟರಾದರೆ ಅದರ ಅರ್ಥ ನಮ್ಮ ಮಾನಸಿಕ ಸ್ಥಿತಿ ಹದಗೆಡುತ್ತಿದೆ ಎಂಬುದು ಸತ್ಯ.

ಮನೋವೈದ್ಯರ ಪ್ರಕಾರ ಎಲ್ಲಾ ದೈಹಿಕ ಅನಾರೋಗ್ಯಕ್ಕೂ ಮಾನಸಿಕ ಅನಾರೋಗ್ಯವೇ ಕಾರಣ. ಮಾನಸಿಕ ತಳಮಳ ದೇಹದ ಮೇಲೆ ಪರಿಣಾಮಬೀರಿ ರೋಗದ ಹೆಸರಿನಲ್ಲಿ ವ್ಯಕ್ತಗೊಳ್ಳುತ್ತದೆ.

ನಮ್ಮ ಮನಸ್ಸು ಚೆನ್ನಾಗಿರಬೇಕಾದರೆ ನಾವು ನಮ್ಮ ಕೆಲಸಗಳಲ್ಲಿ ಧನಾತ್ಮಕ ಭಾವನೆಗಳಿರುವಂತೆ ನೋಡಿಕೊಳ್ಳಬೇಕು. ಬುದ್ಧಿ ಮನಸ್ಸನ್ನು ಸದಾ ಹತೋಟಿಯಲ್ಲಿಡಬೇಕು.

೦ ಶರಾವತಿ ಎಸ್.

# ನಗು ದೇಹ ಸಿರಿಯನ್ನು ಹೆಚ್ಚಿಸುತ್ತದೆ



ನಕ್ಕರೆ ನವರತ್ನಗಳು ಉದುರುತ್ತದೆಯೋ ಇಲ್ಲವೋ ಆದರೆ ನಗುವಿನಿಂದ ನಿಶ್ಚಿತವಾಗಿಯೂ ಆರೋಗ್ಯ ಹೊಂದಬಹುದು ಎನ್ನುತ್ತಿದ್ದಾರೆ ವಿಜ್ಞಾನಿಗಳು!

ಮುಖದಲ್ಲಿನ ಸ್ನಾಯುಗಳು ಪ್ರತ್ಯೇಕವಾದ ಬ್ರೈನ್ ನ್ಯೂರೋಟ್ರಾನ್ಸ್ ಮೀಟರನ್ನು ಉಪಯೋಗಿಸಿಕೊಳ್ಳುತ್ತದೆ. ಮನಃಪೂರ್ವಕವಾಗಿ ನಗುವುದರಿಂದ ಸಂತೋಷಪೂರಿತ ಹೀಲಿಂಗ್ ಹಾರ್ಮೋನ್ ಬಿಡುಗಡೆಗೆ ಸೂಚಿಸುತ್ತದೆ. ಈಸ್ತಬಿಕ್ ಎಂಡಾರ್ಫಿನ್ ರೋಗ ನಿರೋಧಕ ವ್ಯವಸ್ಥೆಯನ್ನು ಉತ್ತಮಗೊಳಿಸುವ ಹಾರ್ಮೋನ್‌ಗಳ ಬಿಡುಗಡೆಗೆ ಸ್ಟ್ರೆಸ್ ಹಾರ್ಮೋನ್‌ಗಳನ್ನು ಕಡಿಮೆ ಮಾಡಲು ನಗುವು ಲಾಭದಾಯಕ ಎಂದು ವಿಜ್ಞಾನಿಗಳು ವಿವರಿಸಿದ್ದಾರೆ.

ಸ್ಮೈಲ್ ಥೆರಪಿಯಿಂದ ಕಾರ್ಟಿಸಾಲ್, ಎಲಡ್ರೆನ್ಲಿನ್ ನೋರಾ ಡ್ರೆನಲೈನ್‌ನಂತಹ ಸ್ಟ್ರೆಸ್ ಹಾರ್ಮೋನ್ ಗಳನ್ನು ಕಡಿಮೆ ಮಾಡುತ್ತದೆ ರಕ್ತದೊತ್ತಡ ಸ್ಥಿರವಾಗಿರುವಂತೆ ಮಾಡುವ ಹಾರ್ಮೋನ್ ಗಳ ಉತ್ಪತ್ತಿಗೆ ಸಹಕರಿಸುತ್ತದೆ. ಸ್ನಾಯುಗಳನ್ನು ರಿಲ್ಯಾಕ್ಸ್ ಮಾಡಿ, ಉಸಿರಾಟವನ್ನು ಸರಾಗವಾಗಿರುವಂತೆ ಮಾಡಲು, ಒಳ್ಳೆಯ ಮೂಡ್ ಉಂಟು ಮಾಡುವಲ್ಲಿ ಈ ಸ್ಮೈಲ್ ಥೆರಪಿ ಸಹಕಾರಿ. ನಗಲು ೨೬ ಸ್ನಾಯುಗಳು ಸಾಕು. ಆದರೆ ಸಿಟ್ಟಿಗೆ ೬೨ ಸ್ನಾಯುಗಳ ಅಗತ್ಯ ಇರುತ್ತದೆ.

೦ ಅರುಂಧತಿ ಎಸ್.



## ಭಯ

ಆವಳು ಇದ್ದಕ್ಕಿದ್ದ
ಹಾಗೇ ನೆನಪಾದಾಗ
ನನಗೆ ತುಂಬಾ ಅಳು ಬರುತ್ತೆ
ಆದರೆ ಸಾಧ್ಯವಾಗುವುದಿಲ್ಲ
ಕಾರಣ,
ಎಲ್ಲಿ ಅವಳು ಕಣ್ಣೀರಿನೊಂದಿಗೆ ಕೆಳಗೆ
ಹರಿದು ಹೋಗುತ್ತಾಳೋ ಎಂಬ ಭಯ

೦ ಮಹೇಶ್ ಎಂ. ಮೈಸೂರು

# ನಾಗಮಾರಪಳ್ಳಿ ಮತ್ತೆ ಚಡ್ಡಿ ಗೇಟಪ್‌ನಲ್ಲಿ ಪ್ರತ್ಯಕ್ಷ !



"ಚುಂಗು ಸಿಕ್ಕರೆ ಹಚ್ಚಡ ನುಂಗುವ ಪೈಕಿ"ಯ ಆಸಾಮಿಯಾದ ಬೀದರನ ಗುರುಪಾದಪ್ಪ ನಾಗಮಾರಪಳ್ಳಿ ಎಲ್ಲರೂ ಊಹಿಸಿದಂತೆ ಕೊನೆಗೂ ಚಡ್ಡಿ ಉಟ್ಟುಕೊಂಡು ತನ್ನ ಹೊಸ ಆಟ ಶುರುಮಾಡಲಿದ್ದಾನೆ. ಇಷ್ಟುದಿನ ದೆಹಲಿ ಅಮ್ಮನ ಮಡಿಲಿನಲ್ಲಿ ಓಲಾಡಿಕೊಂಡು ರಾಜಕೀಯದಲ್ಲಿ ಕಡಿದು ಕಟ್ಟೆ ಹಾಕಿದ್ದೂ ಸಾಲದೆಂಬಂತೆ ಈಗ ಬಿಜೆಪಿ ಚಡ್ಡಿ ಗೇಟಪ್‌ನೊಂದಿಗೂ ಇನ್ನೊಂದಿಷ್ಟು ಕಾಲ ನಮ್ಮೆಲ್ಲರ ಎದುರು ತಾಲೀಮುನಡೆಸಲಿದ್ದಾನೆ.

ಮೇಲುನೋಟಕ್ಕೆ ಶ್ರೀಮಂತಿಕೆಯ ಚಮಚವನ್ನು ಬಾಯಲ್ಲಿ ಇಟ್ಟುಕೊಂಡು ಹುಟ್ಟಿಬಂದಂತೆ ಕಾಣುವ ನಾಗಮಾರಪಳ್ಳಿ ಹುಟ್ಟಿದ್ದು ಬಡತನದ ಹಾಸಿಹೊದ್ದುಕೊಳ್ಳುವಂತ್ತಿದ್ದ ಮನೆತನದಲ್ಲಿ. ಬೀದರ ಜಿಲ್ಲೆಯ ಔರಾದ ತಾಲೂಕಿನ ನಾಗಮಾರಪಳ್ಳಿಯಲ್ಲಿರುವಾಗ ಮಾಮೂಲಿ ಸಹಕಾರಿ ಸಂಘವೊಂದರ ಕಾರ್ಯದರ್ಶಿಯಾಗಿ ನೌಕರಿ ಸೇರಿದ್ದ. ಇದು ಕೂಡ ಒಮ್ಮಿದೊಮ್ಮೆ ದೊರೆತ ಕೆಲಸವಾಗಿರಲಿಲ್ಲ. ಅವರಿವರ ಕೈಬಾಯಲ್ಲಿ ಕೆಲಸ ಕೇಳಿ ಪಡೆದುಕೊಂಡ ಇನಾಮು ಆಗಿತ್ತು. ಆದರೆ ತಾನು ಎಲ್ಲಿಯೇ ಇದ್ದರೂ ತನ್ನ ಕೈಬಾಯಿಗಳನ್ನು ಸದಾ ಬೇರೆಯವರ ಅಮೇಧ್ಯದತ್ತಲೆ ಚಾಚುವ ಜಾಯಮಾನದ ನಾಗಮಾರಪಳ್ಳಿಗೆ ಸಹಕಾರಿ ಸಂಘದ ನೌಕರಿ , ಅದು ಕಾರ್ಯದರ್ಶಿಯ ನೌಕರಿ ಸಿಕ್ಕರೆ ಕೇಳಬೇಕೆ ? ಅಲ್ಲೆಲ್ಲ ಸಾಕಷ್ಟು ಗಲಾಟೆ ಮಾಡಿದ. ಯಾರ ಹೆಸರಿನ ಸಾಲವೋ , ಇನ್ನ್ಯಾರದೋ ಜಾಮೀನು. ಕಛೇರಿಗೆ ಬರದವರ ಹೆಸರಿನ ಮೇಲೂ ಸಾಲಗಳಾಗಿ ಹೋದವು. ಆ ಮೇಲೆ ಅಲ್ಲಿಂದ ಕತ್ತು ಹಿಡಿದು ದಬ್ಬಿಸಿಕೊಂಡು ಹೊರಬಂದ. ಸಹಕಾರಿ ಇಲಾಖೆಯಲ್ಲಿ ಹೇಗೆ ದಿನದಿಂದ ದಿನಕ್ಕೆ ಹೆಗ್ಗಣವಾಗಿ ನಾಗಮಾರಪಳ್ಳಿ ಬಲಿತು ಹೋದ ಎಂಬುದನ್ನು ಹೇಳಬೇಕಾದರೆ ಅದೆ ಒಂದು ದೊಡ್ಡ ರಾಮಾಯಣವಾಗುತ್ತದೆ.

ಆದರೇನಂತೆ "ಜಾಡಿಸಿ ಒದ್ದರೆ ಹೊಳಿಗೆ ಷುಟ್ಟಿಯಲ್ಲಿ ಹೋಗಿ ಬಿದ್ದ" ಎಂದು ಹೇಳುತ್ತಾರಲ್ಲ ಹಾಗೆ ರಾಜಕೀಯ ಪುಢಾರಿನತನದ ಅಖಾಡಕ್ಕೆ ಇಳಿದುಬಿಟ್ಟ. "ಘಟಂಗನ ಕೊನೆಯ ಆಸರೆಯೆ ರಾಜಕೀಯ" ಎಂಬುದು ಈತನಿಗೆ ಅರ್ಥವಾಗುತ್ತಿರುವಂತೆ ತನ್ನ ಬೀಳಲುಗಳನ್ನು ಥಾಳವಾಗಿ ಮೂಡಿಸುತ್ತ ರಾಜಕೀಯದಲ್ಲಿ ಒಂದೊಂದೆ ಹೆಜ್ಜೆ ಮುನ್ನಡೆದು ಇಡತೊಡಗಿದ. ಗ್ರಾಮದ ಸರಪಂಚಸ್ಥಾನವನ್ನು ಕೆಲವೆ ದಿನಗಳಲ್ಲಿ ಆಕ್ರಮಿಸಿಕೊಂಡುಬಿಟ್ಟ. ಅದೇ ಹಳ್ಳಿಯ ಸಹಕಾರ ಸಂಘವೊಂದಕ್ಕೆ ಅಧ್ಯಕ್ಷನೂ ಆದ. ಸಹಕಾರಿ ಸಂಘದ ಲೈಸ್ ಸಿಕ್ಕದ್ದೊಂದು ತಡ ಈತ ಏರಿದ ಏಣಿ ಇಳಿಸುವುದಕ್ಕೂ ಆಗದಷ್ಟು ಜಿಗುಟಾಗಿ ಅದಕ್ಕೆ ಅಮರಿಕೊಂಡಿದ್ದಾನೆ.

ಈ ಹಿಂದೆ ಮಾಣಿಕರಾವ್ ಪಾಟೀಲ ಎಂಬ ರಾಜಕೀಯ ಧುರೀಣ ಹಾಗೂ ರಾಜ್ಯದ ಗೃಹಮಂತ್ರಿಯ ಚುಂಗು ಹಿಡಿದು ರಾಜಕೀಯ ಪ್ರವೇಶಿಸಿದ ನಾಗಮಾರಪಳ್ಳಿ ಮುಂದೆ ಕೆಲವೇ ವರ್ಷಗಳಲ್ಲಿ ಆತನಿಗೆ ಇದಿರಾಗಿ, ಆತನನ್ನೆ ರಾಜಕೀಯವಾಗಿ ಸರ್ವನಾಶ ಮಾಡಿದ ಕೀರ್ತಿಗೂ ಭಾಜನನಾಗಿದ್ದಾನೆ. ಈ ಗುರುಪಾದಪ್ಪನ ವ್ಯಕ್ತಿತ್ವದ ವೈಶಿಷ್ಟ್ಯವೆ ಇದು. ಸ್ವತಃ ತನ್ನ ಮಗನಾದ ಉಮಾಕಾಂತ ನಾಗಮಾರಪಳ್ಳಿಯ ಖಾಸ ಮಾವನೊಂದಿಗೆ ಇಟ್ಟುಕೊಂಡ ದ್ವೇಷ ಅದು ಕೊಲೆಯಾಗುವವರೆಗೂ ತಮದಂಡಿಯಾಗಲಿಲ್ಲ. ಅದು ಒಳಗೊಳಗೆ ಇನ್ನೂ ಬೂದಿಮುಚ್ಚಿದ ಕೆಂಡವಾಗಿಯೆ ಉಳಿದು ಬಿಟ್ಟಿದೆ. ಮುಂದೊಂದು ದಿನ ಮಗ ಉಮಾಕಾಂತ ನಾಗಮಾರಪಳ್ಳಿಯೆ ಸ್ವತಃ ತನ್ನ ತಂದೆಯ ಕತ್ತು ಹಿಡಿದು ಜಗಳಕ್ಕೆ ನಿಂತು ಹೊಡಿ ಬಡಿ ಮಾಡಿಕೊಂಡರೆ ಯಾರೂ ಆಶ್ಚರ್ಯಪಡುವುದಿಲ್ಲ.

ಊಸರವಳ್ಳಿಯ ಪ್ರಮುಖ ಗುಣವನ್ನು ಗುರುತಿಸಿ ಅದನ್ನು ತನ್ನ ವ್ಯಕ್ತಿತ್ವದಲ್ಲಿ ಅಂಟಿಸಿಕೊಂಡು ಬಿಟ್ಟ ನಾಗಮಾರಪಳ್ಳಿ ಅನುಗಾಲದಿಂದಲೂ ಅದರ ಜೊತೆಗೆ ಇದ್ದಾರೆ. ತನ್ನ ಮೊದಲ ಹೆಂಡತಿಗೆ ಕೈಕೊಡುವುದಕ್ಕಿಂತ ಪೂರ್ವದಲ್ಲಿ ಆಕೆಯ ಹೆಸರಿನಲ್ಲಿರುವ ಎಲ್ಲಾ ಆಸ್ತಿಯನ್ನು ಲಪಟಾಯಿಸಿಕೊಂಡ. ಆನಂತರ ಆಕೆ ತನ್ನ ಜೊತೆ ಇದ್ದರೆಷ್ಟು ಹೋದರೆಷ್ಟು ? ಎಂದು ಅಸಡ್ಡೆಯಿಂದ ಕಂಡು ಮನೆಯಿಂದಲೆ ಹೊರ ಹಾಕಿದ. ಆಕೆ ಈಗಲೂ ಕರ್ನಾಟಕದ ಗಡಿಗೆ ಹೊಂದಿಕೊಂಡಿರುವ ಮಹಾರಾಷ್ಟ್ರದ ಹಳ್ಳಿಯೊಂದರಲ್ಲಿ ಕೂಲಿ - ನಾಲಿ ಮಾಡಿಕೊಂಡಿದ್ದಾಳೆ.

ದನ ದಾಹಕ್ಕಾಗಿ ಏನೂ ಬೇಕಾದರೂ ಮಾಡಲು ನಾಗಮಾರಪಳ್ಳಿ ಹಿಂದೆ ಮುಂದೆ ನೋಡುವುದಿಲ್ಲ. ಪಕ್ಷ -ಗಿಕ್ಷ ಎಲ್ಲವೂ ತಂತ್ರಗಳಷ್ಟೆ . ಆತ ಹೇಗಾದರೂ ಸೈ. ಯಾರಾದರೂ ಸೈ. ನಡೆಯುವ ನಾಣ್ಯವಾಗಬೇಕಾದರೆ ತಾನು ಏನು ಮಾಡಬೇಕೋ ಅದೆಲ್ಲವನ್ನು ಮಾಡಲು ತುದಿಗಾಲ ಮೇಲೆ ನಿಂತಿರುತ್ತಾನೆ. ಆರಂಭದಲ್ಲಿ ಜನತಾ ಪರಿವಾರದ ಮೂಲಕ ರಾಜಕೀಯ ಪ್ರವೇಶಿಸಿ ಔರಾದ ಕ್ಷೇತ್ರದಿಂದ ಮೂರು ಸಲ ಸತತವಾಗಿ ಗೆದ್ದುಬಂದು ಹ್ಯಾಟ್ರೀಕ್ ವಿಜಯಿ ಅನ್ನಿಸಿಕೊಂಡ. ಆದರೆ ತಾನು ಸೋತ ಮರು ಘಳಿಗೆಯಲ್ಲಿ ಮತ್ತೆ ಕಾಂಗ್ರೆ ಅಮ್ಮನ ಮಡಿಲು ಸೇರಿಕೊಂಡ.

ರಾಜಕೀಯಕ್ಕಿಂತ ಮುಖ್ಯವಾಗಿ ಈತನಿಗೆ ಬೇಕಾಗಿರುವುದು ತಮ್ಮ ಜಿಲ್ಲೆಯಲ್ಲಿಯ ಡಿ.ಸಿ.ಸಿಬ್ಯಾಂಕ್ ಮತ್ತು ನಾರಂಜಾ ಸಕ್ಕರೆ ಕಾರ್ಖಾನೆಗಳ ಚೇರ್ಮನ್ ಗಿರಿ. ಈ ಎರಡು ಸಹಕಾರಿ ಸಂಘಗಳೆ ನಾಗಮಾರಪಳ್ಳಿ ಇಷ್ಟೆಲ್ಲ ದೌಲತ್ತಿನಿಂದ ಮೆರೆಯುತ್ತಿರಲು ಇರುವ ಮೂಲ ಬಂಡವಾಳಗಳು. ಇವನ್ನು ಬಿಟ್ಟರೆ, ನೀರ ಬಿಟ್ಟು ಮೀನು ಒಂದರಕ್ಷಣ ಇರದೆ ಹೇಗೆ ಸಾಯುತ್ತದೋ ಹಾಗೆ ಗುರುಪಾದಪ್ಪನು ಶಿವನ ಪಾದವನ್ನು ಸೇರುತ್ತಾನೆ. ಸತತ ಹಿಂಡುವ ಹೈನವಾಗಿರುವ ,



ನಿತ್ಯವೂ ಬಂಗಾರದ ತತ್ತಿಯನ್ನು ಕೊಡುವ ಕಾಮಧೇನು – ಕಲ್ಪವೃಕ್ಷವಾದ ಈ ಎರಡೂ ಸಂಸ್ಥೆಗಳನ್ನು ಬಿಡಲು ಈತ ಸುತರಾಂ ತಯಾರಿಲ್ಲ.

ಯಾರೆ ಕೂಗಾಡಿದರೂ, ಯಾರೆಷ್ಟೆ ಹೋರಾಡಿದರೂ ಡಿ.ಸಿ.ಸಿ.ಬ್ಯಾಂಕ್ ಹಾಗೂ ನಾರಂಜಾ ಸಕ್ಕರೆ ಕಾರ್ಖಾನೆಗಳನ್ನು ಬಿಟ್ಟುಕೊಡಲಿಕ್ಕೆ ತಯಾರಿಲ್ಲ. ಅಥವಾ ಸದರಿ ಸಂಸ್ಥೆಗಳ ಕುರ್ಚಿಯನ್ನು ಬಿಟ್ಟು ನಾಗಮಾರಪಳ್ಳಿ ಹೊರಬಂದನೋ ಆತನನ್ನು ಇಡಿ ಬೀದರ ಜಿಲ್ಲೆಯ ಜನತೆ ಕ್ಯಾಕರಿಸಿ ಮಾತ್ರ ಉಗುಳದೆ ಬೀದಿ ಬೀದಿಗಳಲ್ಲಿ ಪೊರಕೆಯ ಸೇವೆಯನ್ನೂ ಮಾಡುತ್ತಾರೆ. ಆದ್ದರಿಂದಲೆ ಯಾವುದೆ ತನಿಖೆಯಾದರೂ ಎಂಥದ್ದೇ ಸರಕಾರಿ ಆಜ್ಞೆ ಇದ್ದರೂ ಅದನ್ನು ಉಲ್ಲಂಘಿಸಿ ಮತ್ತದೆ ಕುರ್ಚಿಗೆ ಅಮರಿಕೊಂಡು ಕುಳಿತುಬಿಡುತ್ತಾನೆ.

ಸಹಕಾರಿ ಕಾಯ್ದೆಯ ಪ್ರಕಾರ ಒಂದು ಸಂಸ್ಥೆಯಲ್ಲಿ ಚೇರ್ಮನ್ ಆಗಿರುವಾತ ಮತ್ತೊಂದು ಸಹಕಾರಿ ಸಂಘಕ್ಕೆ ಅಧ್ಯಕ್ಷನಾಗುವಂತಿಲ್ಲ ಎಂದು ಸ್ಪಷ್ಟವಾಗಿ ಇದೆ. ಇದೀಷ್ಟೆ ಅಲ್ಲದೆ ತೀರಾ ಇತ್ತೀಚೆಗೆ ರೈತ ಹೋರಾಟಗಾರರ ಅವಿತರ ಹೋರಾಟದಿಂದ ಡಿಸಿಸಿ ಬ್ಯಾಂಕ್ ನ್ನು ಅಮೂಲಾಗ್ರ ತನಿಖೆಗೆ ಒಳಪಡಿಸಿತು. ಆಗ ಡಿ.ಸಿ.ಸಿಬ್ಯಾಂಕ್ ಕಾನೂನನ್ನೂ ಉಲ್ಲಂಘಿಸಿದೆ ಎಂದು ಸ್ಪಷ್ಟವಾಗಿ ರಾಯಚೂರಿನ ಡಿಸ್ಟ್ರಿಕ್ ರಜಿಸ್ಟ್ರರ್ ೧೬ ಚಾರ್ಜ ಕ್ಲೇಮ್ ಮಾಡಿದ. ಅವುಗಳೆಲ್ಲ ಸರಕಾರದ ಸಹಕಾರಿ ಇಲಾಖೆಯಲ್ಲಿ ಕೊಳೆಯುವಂತೆ ಮಾಡಿದ್ದಾನೆ. ಈಶ್ವರಪ್ಪ ಚಾಕೋತೆ ಎಂಬ ಪ್ರಾಮಾಣಿಕ ಹೋರಾಟಗಾರ ಈತನ ಬೆನ್ನುಹತ್ತಿ ಕೋರ್ಟ್ ಕಟಕಟೆಯನ್ನೂ ಹತ್ತಿಸಿದ. ಅಲ್ಲೂ ಅದೇನು ಗಿಮಿಕ್ ಮಾಡಿದನೋ ಆ ಕಾನೂನಿಕ ಬಲಿಷ್ಠವಾದ ಕೈಗಳಿಂದಲೂ ಅದೇಗೋ ಬಜಾವಾಗುತ್ತ ನಡೆದಿದ್ದಾನೆ.

ಎಂ.ಡಿ. ಮಠಪತಿ ಹಾಗೂ ಅಶೋಕ ಕುಮಾರ ಎಂಬ ಹಲಾಲಖೋರರನ್ನು ತನ್ನ ಬೆನ್ನಿಗೆ ಇಟ್ಟುಕೊಂಡು ಸಹಕಾರಿ ಸಂಘಗಳನ್ನು ಮುನ್ನಡೆದಿರುವ ನಾಗಮಾರಪಳ್ಳಿಗೆ ಜನ ಸಾಮಾನ್ಯನ



ಅಭ್ಯುದಯಕ್ಕಿಂತ ತನ್ನ ಗುಡಾಣದ್ದೆ ಸದಾ ಚಿಂತೆ. ನಾಗಮಾರಪಳ್ಳಿ ಏನು ಹೇಳುತ್ತಾನೋ ಅದನ್ನು ಮಾತ್ರ ಸಂವಿಧಾನ ಎಂದು ತಿಳಿದಿರುವ ಈ ಘಟಿಂಗರ ಮೂಲಕ ಕೊಳ್ಳೆ ಹೊಡೆದ ಹಣ ಕೋಟ್ಯಂತರ. ಬಿಜೆಪಿಯ ಸರಕಾರ ಬಂದಾಗ ಆರಂಭದಲ್ಲಿ ಸ್ವಲ್ಪ ಆತಂಕವೆ ಅನಿಸಿತ್ತು.

ಆದರೆ ಯಾವಾಗ ಸಹಕಾರಿ ಇಲಾಖೆಗೆ ಲಕ್ಷ್ಮಣ ಸೌದಿ ಮಂತ್ರಿಯಾದನೋ ಆಗ ನಾಗಮಾರಪಳ್ಳಿಯ ದಿಲ್ ಖುಷ್ ಆಯಿತು. ಏಕೆಂದರೆ ಇದೆ ಸೌದಿಯ ಜೊತೆಗೆ ಅಪೆಕ್ಸ್ ಬ್ಯಾಂಕ್‌ನ ಡೈರೆಕ್ಟರ್ ಆಗಿ ಇಪ್ಪತ್ತುವರ್ಷ ಕಳೆದಿದ್ದಾನೆ. ಮೇಲಾಗಿ ಸೌದಿ ನಾಗಮಾರಪಳ್ಳಿಯ ಶಿಷ್ಯ. ಶಿಷ್ಯನಾಗಿರುವ ಲಕ್ಷ್ಮಣಸೌದಿ ಗುರುವಿನ ಮೇಲೆ ಕ್ರಮಕೈಗೊಳ್ಳುವ ತಾಕತ್ತು ಇರಲು ಸಾಧ್ಯವೆ ?

ಕೇವಲ ತನ್ನ ಅಸ್ತಿತ್ವ ಉಳಿವಿಗಾಗಿ ಚೆಡ್ಡಿ ತೊಟ್ಟುಕೊಂಡು ನಾಗಮಾರಪಳ್ಳಿ ಬಿಜೆಪಿಗೆ ಸೇರಿದ್ದಾಗಿದೆ. ಆದರೆ ಜಿಲ್ಲೆಯ ಬಿಜೆಪಿ ಪಾಳೆಯಲ್ಲಿಯೆ ಅಪಸ್ವರ ಹಬ್ಬಿದೆ. ಜಿಲ್ಲಾ ಬಿಜೆಪಿ ಅಧ್ಯಕ್ಷ ಮದಕಟ್ಟಿ, ಭಾಲ್ಕಿಯ ಮಾಜಿ ಶಾಸನ ಪ್ರಕಾಶ ಖಂಡ್ರೆ, ಸುಭಾಷಕಲ್ಲೂರ ಮುಂತಾದವರು ಒಳಗೊಳಗೆ ಒಂದೆ ಸಮ ಹಲ್ಲು ಮಸೆಯುತ್ತಿದ್ದಾರೆ.

ಆದರ್ಶವಾದದ ರಾಜಕೀಯ ಮರೆಯಾಗಿ ಅವಕಾಶವಾದಿ ರಾಜಕೀಯವೆ ಮೇಲು ಎಂಬ ಭಾವನೆಯೆ ಗಟ್ಟಿಯಾಗುತ್ತಿರುವ ಇಂದಿನ ದಿನಮಾನಗಳಲ್ಲಿ ಡಸ್ಟಬಿನ್‌ಗೆ ಎಸೆಯಬೇಕಾದ, ಗಬ್ಬು ವ್ಯಕ್ತಿತ್ವದ ಇಂಥ ಐನಾತಿ ರಾಜಕಾರಣಿಗಳು ರಾಜಕೀಯ ರಂಗದ ಪರದೆಯ ಮೇಲೆ ನಿಂತು ಬಣ್ಣಹಚ್ಚಿಕೊಂಡು ಕುಣಿಯುವುದು, ನಾವೆಲ್ಲ ಮೂಕಪ್ರೇಕ್ಷಕರಾಗಿ ನೋಡುವುದು ಎಂಥ ದುರ್ವಿಧಿ. ಅಲ್ಲವೆ ?

೦ ವರದಿಗಾರ

## ಕವಿತೆ ಹಾಗೂ ಬಟ್ಟೆ

ನಿನ್ನ
ನನ್ನ
ಪ್ರೀತಿ
ವೃತ್ತಪತ್ರಿಕೆಯಲ್ಲ
ನಿರಂತರವೂ
ಸತ್ಯವಾಗಿರುವ
ಕವಿತೆ

೦ ಸೋಮು

ನಿನ್ನ
ನೆನಪೆಂಬ
ಬೇಲಿಗೆ
ಸಿಕ್ಕಿ ಬಿದ್ದಿರುವ
ತೆಳುವಾದ
ಬಟ್ಟೆ
ನಾ.....

೦ ಸೋಮು

## ಸಾಕ್ಷಿಗಾಗಿ

ನೀ
ಕೊಟ್ಟ ಮುತ್ತುಗಳ
ನಾ
ಹಾಗೆ ಕಾಯ್ದಿಟ್ಟಿರುವೆ
ನಿನ್ನೆದೆಯ ಪ್ರೀತಿ
ತಾಳ ತಪ್ಪಿದಾಗ
ಸಾಕ್ಷಿಗಾಗಿ !

೦ ಸೋಮು

# ಜಿಲ್ಲಾಧಿಕಾರಿ ಹರ್ಷಗುಪ್ತನೂ ಪಿಂಜರಾಪೋಲು ಪತ್ರಕರ್ತರು

ಬೀದರ ಜಿಲ್ಲೆಯಲ್ಲಿ ಇರುವಷ್ಟು ಹಲಾಲುಟೋಪಿ ಗುಣದ ಪತ್ರಕರ್ತರು ಎಲ್ಲಾದರೂ ಇದ್ದಾರೋ ಇಲ್ಲವೋ ? ಇಲ್ಲಿ ಮಾತ್ರ ಘಟಿಂಗ ರಾಜಕೀಯದ ವ್ಯಕ್ತಿಗಳಿಗೆ ಮಣಿ ಹಾಕುವ ಪತ್ರಕರ್ತರೆ ತುಂಬಿ ತುಳುಕುತ್ತಿದ್ದಾರೆ. ಇವರಲ್ಲಿ ಪ್ರಮುಖವಾಗಿ ಯಾರದಾದರೂ ಒಂದೆರಡು ಹೆಸರು ಹೇಳಬೇಕೆಂದು ಎಲ್ಲರೂ ನಾಮುಂದೆ ತಾಮುಂದೆ ಎಂದು ತೂರಿಬರುತ್ತಾರೆ.

ಬೀದರ ರಹಸ್ಯ ಎಂಬ ಪತ್ರಿಕೆಯ ಸಂಪಾದಕನಾಗಿದ್ದ ಮಾಜಿ ಪತ್ರಕರ್ತ ಡಿ.ಕೆ.ಶಿವಕುಮಾರ , ಉತ್ತರ ಕರ್ನಾಟಕ ದಿನ ಪತ್ರಿಕೆಯ ಶಿವಶರಣಪ್ಪ ವಾಲಿ ಇವರಲ್ಲಿ ಪ್ರಮುಖರು. ಕೆಲವೇ ವರ್ಷಗಳ ಹಿಂದೆ ಇವರಿಗೆ ಜಿಲ್ಲೆಯಲ್ಲಿ ಇರಲು ಒಂದೆ ಒಂದು ಸ್ವಂತದ ಸ್ಥಳ ಇರಲಿಲ್ಲ. ಆದರೆ ಇಂದು ಎಲ್ಲಾ ರಾಜಕಾರಣಿಯನ್ನು ಮೀರಿಸುವಷ್ಟು ದುಡ್ಡು ಕಮಾಯಿಸಿಕೊಂಡಿದ್ದಾರೆ. ಸದಾ ಗುರುಪಾದಪ್ಪ ನಾಗಮಾರಪಳ್ಳಿಯ ಹಿಂದೆ ಸುತ್ತುತ್ತ ಆತನ ಬಹುಪರಾಕ ಹಾಕುವುದೆ ಇವರ ಕೆಲಸ. ಆತ ಸೀನಿದರೂ ಹೂಸು ಬಿಟ್ಟರೂ ಅದು ಪತ್ರಿಕೆಯಲ್ಲಿ ಪ್ರಮುಖ ಸುದ್ದಿಯಾಗಿ ಪ್ರಕಟಿಸಿ ಪ್ರಚಾರದಲ್ಲಿರುವಂತೆ ನೋಡಿಕೊಳ್ಳುತ್ತಾರೆ.

ಇದಕ್ಕೆ ಫಲವಾಗಿ ಡಿ.ಕೆ.ಸಿದ್ರಾಮನಿಗೆ , ವಾಲಿ ಶಿವಶರಣಪ್ಪನಿಗೆ ಕೋಟ್ಯಂತರ ರೂಪಾಯಿಗಳ ಸಾಲವನ್ನು ಡಿಸಿಸಿ ಬ್ಯಾಂಕ್‌ನಲ್ಲಿ, ಯಾವುದೆ ಆಸ್ತಿಯನ್ನು ಆಡವಾಗಿ ಇಟ್ಟುಕೊಳ್ಳದೆ ಕೊಟ್ಟ ಕೀರ್ತಿಗೆ ಗುರುಪಾದಪ್ಪ ಪಾತ್ರನಾಗಿದ್ದಾನೆ. ಹೀಗೆ ಸಾರ್ವಜನಿಕರ ದುಡ್ಡನ್ನು ತನ್ನ ಹಿಂಬಾಲಕ ಮುಂಬಾಲಕರೆಂಬ ಬಾಲಂಗೋಚಿಗಳಿಗೆ ಹಂಚಿ ಗುರುಪಾದಪ್ಪ ತನ್ನ ದೊಡ್ಡಸ್ಥಿಕೆಯನ್ನು ಮೆರೆಯುತ್ತಿದ್ದಾನೆ.

ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಬೀದರ ಜಿಲ್ಲೆಗೆ ಯಾವುದೆ ಅಧಿಕಾರಿ ಬಂದರೂ ಆತ ನಾಗಮಾರಪಳ್ಳಿಯ ಹುಕುಂ ಪಾಲಿಸಲೆ ಬೇಕು ಎಂಬ ಅಲಿಖಿತ ನಿಯಮವೆ ಇದೆ. ಇದರಲ್ಲಿ ಸ್ವಲ್ಪವೆ ಫರಾಕಾದರೂ ಸಾಕು ಆತ ಮಾರನೆಯ ದಿನವೆ ಎತ್ತಂಗಡಿ ಆಗುತ್ತಾನೆ. ಇದು ಎಲ್ಲರಿಗೂ ಗೊತ್ತಿರುವ ಬಹಿರಂಗ ಸತ್ಯ. ಇದೆಲ್ಲ ಹೌದೆಂಬಂತೆ ಬಿಂಬಿಸುವ ಹಲಾಲುಕೋರ ಪತ್ರಕರ್ತರು ಯಾವಾಗಲೂ ಜೊತೆ ಇರುವಾಗ ನಾಗಮಾರಪಳ್ಳಿಗೆ ಇದು ಇನ್ನಷ್ಟು ಸಲೀಸಾಗುತ್ತದೆ. ರಾಜಕೀಯ ಘಟಿಂಗತನ ( ವರ್ಚಸ್ಸು) ಒಂದು ಕಡೆಯಾದರೆ ಸುದ್ದಿ ಮಾಧ್ಯಮದವರ ಬೆಂಬಲ ಇನ್ನೊಂದು ಕಡೆ ಸಿಗುತ್ತಿದ್ದರೆ ಎಂಥ ಸಾಮಾನ್ಯನ್ನೂ ನರಮ್ ಆಗಿ ಹೋಗುತ್ತಾನೆ.

ಒಂದೆರಡು ವರ್ಷಗಳ ಹಿಂದೆ ಹರ್ಷಗುಪ್ತ ಎಂಬ ಜಿಲ್ಲಾಧಿಕಾರಿ ಬೀದರ ಜಿಲ್ಲೆಯ ನಕಾಶೆಯನ್ನೆ ತನ್ನ ಅಧಿಕಾರದ ಬಲದಿಂದ ಬದಲಾಯಿಸಿದ್ದಾನೆ. ಕಾನೂನುಗಳು, ಭಾರತದ ಸಂವಿಧಾನ ಇನ್ನೂ ಬದುಕಿದೆ ಎಂಬುದನ್ನು ಸಾಮಾನ್ಯ ಜನತೆಗೆ ತೋರಿಸಿದ್ದಾನೆ. ಶ್ರೀಸಾಮಾನ್ಯನಿಗೂ ಹಾಗೂ ನಾಗಮಾರಪಳ್ಳಿಯಂಥ ಐನಾತಿ ಆಸಾಮಿಗೂ ಒಂದೆ ರೀತಿಯ ಕಾನೂನು ಇರುತ್ತದೆ ಎಂದು ತೋರಿಸಿದ್ದಾನೆ. ಇದನ್ನೆ ನೆಪವಾಗಿಟ್ಟುಕೊಂಡ ನಾಗಮಾರಪಳ್ಳಿ ಇದೀಗ ಆತನನ್ನು ಎತ್ತಂಗಡಿ ಮಾಡುವ ಹುನ್ನಾರದಲ್ಲಿ ಬೀಜಿಯಾಗಿದ್ದಾನೆ.

ಇಂಥ ಹಲಾಲುಖೋರ ರಾಜಕಾರಣಿಯನ್ನು ಬೀದರ ಜನತೆ ಇನ್ನೆಷ್ಟು ದಿನ ಸಹಿಸುತ್ತಾರೊ ?

(೧೫ನೇ ಪುಟದಿಂದ)



ಪ್ರಮೋದ ತಿವಾರಿ

# ಮ.ಪಾ.ಯ ಜಂಗಿಕುಸ್ತಿಗೆ ಕಾರಣವೇನು ?

ಮಾಜಿ ಮುಖ್ಯಮಂತ್ರಿ ಧರ್ಮಸಿಂಗ್ ಅವರ ಸಹೋದರ ಸಂಬಂಧಿಯಾಗಿರುವ ಉಪಮೇಯರ್ ಪ್ರಮೋದ ತಿವಾರಿಗೆ ಸಹಜವಾಗಿಯೆ ಸುಪಿರ್‍ಯಾರಿಟಿ ಕಾಂಪ್ಲೇಕ್ಸ್. ಮೇಯರ್ ಸಹೀದಾಬೇಗಂ ಮಾತು ಒತ್ತಟ್ಟಿಗಿರಲಿ , ನನ್ನ ಮಾತನ್ನೂ ಈ ಮಾಮೂಲಿ ಕಮೀಷನರ್ ಉಪೇಕ್ಷಿಸುತ್ತಾನೆಂದರೆ ಏನರ್ಥ ? ಎಂಬ ರೀತಿಯಲ್ಲಿ ಹಲವಾರು ಸಲ ತನ್ನ ಹಿಂಬಾಲಕರ ಮುಂದೆ ಅವಲತ್ತುಕೊಂಡದ್ದೂ ಇದೆ. ಕಳ್ಳನಿಗೊಂದು ಪಿಳ್ಳೆ ನೆವ ಎಂಬಂತೆ ಉಪಮೇಯರ್‌ಗಾಗಿಯೆ ಇರುವ ಕಾರು ರಿಪೇರಿಗಾಗಿ ಗ್ಯಾರೇಜನಲ್ಲಿದೆ. ಅದನ್ನು ತರಿಸಿಕೊಡುವುದಕ್ಕೆ ಪಾಲಿಕೆಯ ಕಮೀಷನರ್ ಕ್ರಮಕೂಡ ತಗೊಂಡಿದ್ದಾರೆ. ಆದರೆ ಹೇಗಾದರೂ ಸೈ ಕಾಲು ಕೆದರಿ ಜಗಳ ತೆಗೆಯಬೇಕೆಂದು ಹೊಂಚು ಹಾಕಿದವರಿಗೆ ಯಾವ ಕಾರಣವೂ ಬೇಕಿಲ್ಲ ಅಲ್ಲವೆ ? ಅಂದಂತೆ ೨ ಸೋಮವಾರ ಮಾರ್ಚ ೨೦೦೯ ರಂದು ಮಧ್ಯಾಹ್ನ ತನ್ನ ಬೆಂಬಲಿಗ ಸದಸ್ಯರೊಂದಿಗೆ ಕಮೀಷನರ್‌ಗಾಗಿಯೆ ಇರುವ ಕಾರಿನಲ್ಲಿ ಕುಳಿತುಕೊಂಡು ತಮ್ಮನ್ನು ಎಲ್ಲಿಗೋ ಕರೆದುಕೊಂಡು ಹೋಗುವಂತೆ ದುಂಬಾಲು ಬಿದ್ದಿದ್ದಾರೆ. ಆದರೆ ಇದು ಕಮೀಷನರ್‌ರ ಕಾರಿನ ಚಾಲಕನಿಗೆ ಇಕ್ಕಟ್ಟಿನಲ್ಲಿ ಸಿಕ್ಕಿಸಿದೆ. ಸಾಹೇಬರೂ ಊಟಕ್ಕೆ ಹೋಗುವವರಿದ್ದಾರೆ , ಅವರಿಂದ ಒಂದು ಮಾತು ಹೇಳಿಸಿದ್ದರೆ ಸರಿಯಾಗಿತ್ತು ಎಂದು ಅವಲತ್ತುಕೊಂಡಿದ್ದಾನೆ. ಕೊನೆಗೆ ಕಮೀನರ್ ಕಛೇರಿಯ ಹೊಳ ಹೊಕ್ಕು ಅವರನ್ನು ಅವಾಚ್ಯ ಶಬ್ಧಗಳಿಂದ ನಿಂದಿಸಿದ್ದೆ ಅಲ್ಲದೆ , ಅವರ ಮೇಲೆ ತೋಳು ಏರಿಸಿಕೊಂಡು ಹೋಗಿದ್ದಾರೆ.

ಇಂಥ ಸಂದರ್ಭದಲ್ಲಿ ಕಮೀಷನರ್ ಅವರೆ ಚಾಕಚಕ್ಯತೆ ಪ್ರದರ್ಶಿಸಿ ಸ್ವಲ್ಪ ಜಾಣತನ ಪ್ರದರ್ಶಿಸಿದ್ದರೆ ಈ ಜಂಗಿ ಕುಸ್ತಿಗೆ ಮಹಾನಗರ ಪಾಲಿಕೆಯಲ್ಲಿ ಅಖಾಡವೆ ನಿರ್ಮಾಣವಾಗುತ್ತಿರಲಿಲ್ಲ. ಆದರೆ ಅಜಾಗರ್ಯವಲ್ಲಿ ಡಾ.ಕೆ.ಜಿ.ಜಗದೀಶ್ ಕನಿಷ್ಠ ಸೌಜನ್ಯವನ್ನು ಮರೆತು ಕಾನೂನು ಚೌಕಟ್ಟಿನಲ್ಲಿ ವ್ಯವಹರಿಸಿದ್ದಾರೆ. ತಮ್ಮ ಕಾರು ಪತ್ತಿ ಕುಳಿತ ಉಪಮೇಯರ್ ತಿವಾರಿಯನ್ನು ಕೆಳಗಿಳಿಯುವಂತೆ ಮಾಡಲು ಕಾನೂನು ಮೊರೆಹೋಗುವ ಬೆದರಿಕೆ ಹಾಕಿದ್ದಾರೆ. ಇದನ್ನು ಕಂಡು ಹೌಹಾರಿದ ಪಾಲಿಕೆಯ ಮೇಯರ್ ಉಪಮೇಯರ್ ಸದಸ್ಯರೆಲ್ಲ ಪಕ್ಷಭೇದ ಮರೆತು ಕಮೀಷನರ್ ವಿರುದ್ಧ ತಿರುಗಿಬಿದ್ದಿದ್ದಾರೆ. ಪಾಲಿಕೆಯ ನೌಕರರೂ ಕಮೀಷನರ್ ಪರವಾಗಿ ನಿಂತಿದ್ದಾರೆ. ಒಟ್ಟಿನಲ್ಲಿ ಮಹಾನಗರ ಪಾಲಿಕೆ ಅಧಿಕಾರದ ದರ್ಪದ ಪ್ರದರ್ಶನಕ್ಕಾಗಿ ಜಂಗಿಕುಸ್ತಿ ಆರಂಭವಾಗಿದೆ.

ನಗರದ ಸರ್ವಾಂಗೀಯ ಅಭಿವೃದ್ಧಿಗಾಗಿ ಚಿಂತಿಸಬೇಕಾದ ಪಾಲಿಕೆಯ ಸದಸ್ಯರು ಕೇವಲ ತಮಗೆ ಕೊಡಮಾಡುವ ಕೆಂಪುಗೂಟದ ಕಾರಿಗಾಗಿ ಕಿತ್ತಾಡುವುದು, ಸೌಜನ್ಯಮರೆತು ತಮ್ಮ ಒಣ ಪ್ರತಿಷ್ಠೆಗಾಗಿ ಕಾರನ್ನು ಬಿಟ್ಟು ಕೊಡದ ಕಮೀಷನರ್ ಡಾ. ಜಗದೀಶ್ ಅವರ ಹಟಮಾರಿತನ ಮುಂದೆ ನಗರದ ಮಹಾಜನತೆಗೆ ಬೆಕ್ಕಸಬೆರಗಾಗಿ ನಿಂತಿದ್ದಾರೆ.

ಜನತೆಯ ಹಿತ ಕಾಪಾಡಬೇಕಾದ ಜನಪ್ರತಿನಿಧಿಗಳೆಂಬ ರಾಜಕಾರಣಿಗಳು, ಅಧಿಕಾರದ ಅಮಲಿನಲ್ಲಿ ಸೌಜನ್ಯವನ್ನೆ ಮರೆತಿರುವ ಕಮೀಷರ್ ಜಟಾಪಟಿಯಲ್ಲಿ ತೊಡಗಿದರೆ ಜನ ಬೀದಿಗೆ ಇಳಿದು ಇಬ್ಬರನ್ನೂ ಕ್ಯಾಕರಿಸಿ ಉಗುಳುವ ನಿರ್ಧಾರಕ್ಕೆ ಬಂದರೆ ತಪ್ಪಾಗಲಾರದೇನೋ ? ೦ ವರದಿಗಾರ

# ನರಸಿಂಹಯ್ಯನವರ ಕೆಮ್ಮು ತಂದ ಅವಾಂತರ

ಕನ್ನಡ ನಾಡಿನ ಎಲ್ಲರಿಂದಲೂ ಎಚ್. ಎನ್. ಎಂದೇ ಖ್ಯಾತ ನಾಮರಾಗಿದ್ದ ಡಾ. ಎಚ್. ನರಸಿಂಹಸ್ವಾಮಿ ಅಪರೂಪದ ವ್ಯಕ್ತಿ. ಸರಳತೆಯೇ ಮೈವೆತ್ತಂತ್ತಿದ್ದ ನರಸಿಂಹಯ್ಯನವರು ಅಪ್ಪಟ ಗಾಂಧಿವಾದಿ. ಇವರ ವೈಚಾರಿಕ ನಿಲುವಿನಿಂದ ಈಗೀನ ಬುರುಡೆ ಬಾಬಾ ಹಲವಾರು ಸಲ ತನ್ನ ಡ್ರೆಸ್‌ನೊಳಗೆ ಬೆವತು ಹೋದ ಸಾಕಷ್ಟು ಉದಾಹರಣೆಗಳಿವೆ.

ತಮ್ಮ ಜೀವಿತ ಕೊನೆಯ ಅವಧಿಯವರೆಗೂ ನಾಡು – ನುಡಿಯ ಬಗೆಗೆ ಕಳಕಳಿ ಹೊಂದಿದ್ದ ಎನ್. ಕುರಿತು ಲಿಂ.ಡಾ. ಸ.ಜ.ನಾಗಲೋಟಿಮಠ ಹತ್ತಿರದಿಂದ ಕಂಡ ಸಂಗತಿಗಳನ್ನು ನಮ್ಮ ಓದುಗರಿಗಾಗಿ ಇಲ್ಲಿ ದಾಖಲಿಸಬಯಸಿದ್ದೇವೆ.

೦ ಸಂಪಾದಕರು



ಒಂದು ಸಲ ನರಸಿಂಹಯ್ಯನವರಿಗೆ ಉಗುಳು ನೆಗಡಿ ಆಗಿತ್ತು. ಒಂದು ವಾರದಲ್ಲಿ ಗುಣವಾಗಬಹುದೆಂದು ಎಣಿಸಿದ್ದರು. ಆದರೆ ಕಡಿಮೆಯಾಗಲೇ ಇಲ್ಲ. ಕೆಮ್ಮು ಜಾಸ್ತಿ ಆಯಿತು. ಅಂಥಿಂಥ ಗುಳಿಗೆಗಳನ್ನು ನುಂಗಿದರು. ಕೆಮ್ಮು ಮುಂದುವರೆಯಿತು. ಡಾ.ಮಯ್ಯ ಅವರು ನರಸಿಂಹಯ್ಯನವರ ನೆಚ್ಚಿನ ವೈದ್ಯರು. ಅವರಿಗೆ ಫೋನು ಮಾಡಿ ತಮ್ಮ ತೊಂದರೆ ಮಾಡಿಕೊಂಡ ಉಪಚಾರ ವಿವರಿಸಿದರು. ಯಾವ ಗುಳಿಗೆ ತೆಗೆದುಕೊಳ್ಳಲು ಕೇಳಿದರು. ಆಗ ಡಾ.ಮಯ್ಯ ಅವರು ಸರ್ ಯಾವ ಮಾತ್ರೆಗಳೂ ಬೇಡ. ಇದು ವೈರಲ್ ರೋಗ. ಸರಿಯಾದ ಮದ್ದುಗಳು ಇನ್ನೂ ದೊರೆತಿಲ್ಲ. ಕಾರಣ ಸ್ವದೇಶಿ ಉಪಚಾರ ಮಾಡೋಣ. ನೀವು ಎಲ್ಲ ಮಾತ್ರೆಗಳನ್ನು ನಿಲ್ಲಿಸಿಬಿಡಿ. ದಿನಾಲು ಮುಂಜಾನೆ ೬–೮ ದಳ ತುಳಸಿ ತಿನ್ನಿರಿ. ಕೆಮ್ಮು ಕಡಿಮೆಯಾಗುವುದು.

ನರಸಿಂಹಯ್ಯನವರು ಸರಿ ಎಂದರು. ಅಂದಿನಿಂದ ದಿನಾಲು ಸಂಜೆ, ಮುಂಜಾವು ತುಳಸಿ ತಿನ್ನಲು ಪ್ರಾರಂಭಿಸಿದರು. ನರಸಿಂಹಯ್ಯ ಏನೇ ಮಾಡಲಿ ಬಹಳ ನಿಷ್ಠೆಯಿಂದ ಮಾಡುವವರು. ಇದೆಲ್ಲ ನಡೆದು ೧೦ ದಿನಗಳಾದ ಮೇಲೆ ನಾನು ಅವರನ್ನು ಕಾನಲು ಹೋದೆ. ರೂಢಿಯಂತೆ ಅವರ ಆರೋಗ್ಯದ ಬಗ್ಗೆ ತಿಳಿಸಿದರು. ನನಗೆ ಅನಿಸಿದ್ದೆಂದರೆ ಕೆಮ್ಮು ಕಡಿಮೆಯಾಗಿರಬಹುದು. ನಾನು ಈಗ ಏನಾಗಿದೆ ಸರ್ ಎಂದೆ.

ನ : ಏನಾಗುವುದಪ್ಪಾ, ಸುತ್ತಲಿನ ಬ್ರಾಹ್ಮಣರ ಮನೆಗಳ ಮುಂದಿದ್ದ ತುಳಸಿ ಗಿಡಗಳೆಲ್ಲ ಮೊಂಡಾಗಿವೆ. ಕೆಮ್ಮು ಹಾಗೇ ಇದೆ.

ನಾನು : ನಗುತ್ತ ನಿಂತೆ. ನಕ್ಕು ನಕ್ಕು ನಾನು ಕೆಮ್ಮಲು ಪ್ರಾರಂಭಿಸಿದೆ. ನರಸಿಂಹಯ್ಯನವರೂ ನಕ್ಕರು.

ನ : ಬಹುಶಃ ಬ್ರಾಹ್ಮಣರೆಲ್ಲ ಕೂಡಿ ತುಳಸಿ ಮುಗುಳು ಯಾರು ಕದಿಯುತ್ತಿರಬಹುದೆಂದು ಹುಡುಕುತ್ತಿರಬಹುದು. ಸಿಕ್ಕರೆ ಗತಿ ಏನು ? ಕಾರಣ ತುಳಸಿಯನ್ನೂ ನಿಲ್ಲಿಸಿರುವೆ.

# ಬ್ರಾಹ್ಮಣ ಜೊತೆ ಕುಳಿತ ಶೂದ್ರನ ಕುಂಡೆ ಕತ್ತರಿಸಬೇಕು.

'ಮನುಸ್ಮೃತಿ'ಯೇ ನಮ್ಮ (ಹಿಂದೂ) ಧರ್ಮದ ಬೈಬಲ್ ಅದು ಜಾರಿಗೆ ಬರಲೇಬೇಕೆಂದು ಹುನ್ನಾರ ನಡೆಸಿರುವ ಸಂಘಪರಿವಾರಿಗಳು ಯಾವತ್ತೂ ವಿತಂಡವಾದಿಗಳೆ ಆಗಿದ್ದಾರೆ. ಒಂದು ಕಡೆ ಸಮಾನತೆಯ ಪಾಠ ಬೋಧಿಸುತ್ತ ಅಸಮಾನತೆಯನ್ನು ಬಿತ್ತುವ ಕಳ್ಳ ಕೊರಮರು.

ಮನುಷ್ಯನ ಹುಟ್ಟೆ ಶ್ರೇಷ್ಠ ಎಂದೆ ವಾದಿಸುವ ಈ ಅವಿವೇಕಿಗಳು ಹಿಂದೆ ಎಂಥೆಂಥ ವಿತಂಡವಾದವನ್ನು ಧರ್ಮದ ಹೆಸರಿನಲ್ಲಿ ತುರುಕಿ ಜನತೆಯನ್ನು ದಿಕ್ಕುತಪ್ಪಿಸುತ್ತಿದ್ದರು ಎಂದು ನಿಮಗೆಲ್ಲ ಗೊತ್ತಾದರೆ ಅವರ ಹುನ್ನಾರ ಅರಿಯಲು ಸಾಧ್ಯವಾಗುತ್ತದೆ.

ಮನುಸ್ಮೃತಿಯ ಆಯ್ದ ಕೆಲವು ವಾಕ್ಯಗಳು.

* ಬ್ರಾಹ್ಮಣನು ಕಾಮವಶನಾಗಿ ಶೂದ್ರ ಸ್ತ್ರೀಯನ್ನು ಸಂಭೋಗಿಸಿದರೆ , ಆ ಕಾಮುಕತನದಿಂದ ಹುಟ್ಟಿದ ಗಂಡು ಮಗುವು ಜೀವಂತವಿದ್ದರೂ ಶವದಂತೆ. ಆ ಗಂಡು ಮಗುವನ್ನು 'ಪಾರಶವ' ಎನ್ನುತ್ತಾರೆ.
(ಅಧ್ಯಾಯ-೯,೧೭೮)

* ಮೃತ ಬ್ರಾಹ್ಮಣನ ಆಸ್ತಿಯನ್ನು ರಾಜನು ವಶಪಡಿಸಬಾರದು. ಆದರೆ ಇತರ ವರ್ಣದವರು ಮೃತಪಟ್ಟರೆ ರಾಜನು ಅವರ ಆಸ್ತಿಯನ್ನು ಹೊಂದಲು ಅರ್ಹನಾಗಿರುತ್ತಾನೆ.
(ಅಧ್ಯಾಯ-೯,೧೮೯)

* ವೇದ ಪಾರಂಗತನಾದ ಬ್ರಾಹ್ಮಣನು ಸಕಲ ಲೋಕಕ್ಕೆ ಒಡೆಯನು( ಅಧ್ಯಾಯ : ೯,೨೨೫ )

* ಶೂದ್ರನು ಸಂಬಳಕ್ಕೆ ಗೊತ್ತು ಮಾಡಿಕೊಂಡವನಾಗಿರಲಿ ಅಥವಾ ಇಲ್ಲದಿರಲಿ ಅಂಥ ಶೂದ್ರನಿಂದ ಬ್ರಾಹ್ಮಣನು ತನ್ನ ಸೇವೆ ಮಾಡಿಸಿಕೊಳ್ಳಬೇಕು. ಏಕೆಂದರೆ ಶೂದ್ರನು ಬ್ರಾಹ್ಮಣನ ಸೇವೆಗಾಗಿಯೇ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದ್ದಾನೆ.
(ಅಧ್ಯಾಯ -೮,೪೧೩)

* ಒಬ್ಬ ಬ್ರಾಹ್ಮಣನು ಎಲ್ಲ ವಿಧದ ಅಪರಾಧಗಳನ್ನು , ಪಾಪಗಳನ್ನು ಮಾಡಿದರೂ ಅವನನ್ನು ಕೊಲ್ಲಬಾರದು. ಅವನ ಸರ್ವಸ್ವವನ್ನು ಅಪಹರಿಸಿ ಅವನನ್ನು ದೇಶದಿಂದ ಹೊರಗೆ ಹಾಕಬೇಕು.
(ಅಧ್ಯಾಯ -೮,೩೮೦)

* ಬ್ರಾಹ್ಮಣನ ಜತೆಗೆ ಒಂದೇ ಆಸನದಲ್ಲಿ ಕುಳಿತ ಅಂತ್ಯಜನಿಗೆ ಅಥವಾ ಶೂದ್ರನಿಗೆ ಸೊಂಟದಲ್ಲಿ ಬರೆ ಎಳೆದು ಊರಿನಿಂದ ಹೊರಗೆ ಹಾಕಬೇಕು. ಅಥವಾ ಕುಂಡೆಯನ್ನು ಕತ್ತರಿಸಬೇಕು.

– ಏಕಲವ್ಯ

( ಅಧ್ಯಾಯ : ೮,೨೮೧ )

# ಕರ್ಣನ ವೈಚಾರಿಕತೆ



೦ ಶಿವಣ್ಣ ಇಜೇರಿ , ಶಹಾಪುರ

ಮಹಾ ಭಾರತದಲ್ಲಿ ಪಾಂಡವರ ವಂಶಸ್ಥನಾದರೂ ಕೌರವರ ಒಡನಾಡಿಯಾಗಿ ಅವರ ಅನ್ನದ ಋಣಕ್ಕಾಗಿ ತನ್ನ ಪ್ರಾಣವನ್ನೆ ಸಮರ್ಪಿಸಿದ ಮಹಾನ್ ಶೂರ ಸೇನಾನಿ ಕರ್ಣ. ಆತನ ರಾಜನಿಷ್ಠೆಯ ಬಗ್ಗೆ ಎಷ್ಟು ಕೊಂಡಾಡಿದರೂ ಕಡಿಮೆ. ದಾನದ ಪ್ರಶ್ನೆ ಬಂದಾಗ ಮೇಲೆದ್ದು ಬರುವ ಹೆಸರೆ ಕರ್ಣನದು. ಯಾವ ಸಂದರ್ಭದಲ್ಲಿಯೇ ಆಗಲಿ ಆತನ ದಾನಕ್ಕೆ ಹಿಂದು ಮುಂದ ನೋಡದ ಸ್ವಭಾವ. ಆದರ ಪರಿಣಾಮದ ಬಗ್ಗೆಯೇ ಆಲೋಚನೆ ಮಾಡದೆ ಬೇಡಿದವರಿಗೆ ಬೇಡಿದ್ದನ್ನೇ ಕೊಟ್ಟು ಬಿಡುವ ಮನಸ್ಸುಳ್ಳ ದಾನವಂತ. ಅದಕ್ಕಾಗಿ ಆತನಿಗೆ " ದಾನಶೂರ ಕರ್ಣ" ಎಂದಬ ಹೆಸರು ಇತಿಹಾಸದಲ್ಲಿ ಉಳಿದಕೊಂಡು ಬಂದಿದೆ.

ಒಂದು ಸಲ ಮುಂಜಾನೆ ಕರ್ಣ ತನ್ನ ಅರಮನೆಯಲ್ಲಿ ಕ್ಷಾರ ಮಾಡಿಕೊಳ್ಳಲು ಕುಳಿತಿರುತ್ತಾನೆ. ಆಗ ಅದೆ ಸಮಯಕ್ಕೆ ಒಬ್ಬ ಬಡ ಬ್ರಾಹ್ಮಣ ಆತನ ಮುಂದೆ ಬಂದು ತನ್ನ " ಮಗನ ಮದುವೆಗೆ ಹಣದ ಕೊರತೆಯಾಗಿದೆ ಅದಕ್ಕಾಗಿ ತಮ್ಮಲ್ಲಿ ಬಂದಿದ್ದೇನೆ. ತಾವು ಸಹಾಯ ಮಾಡಬೇಕೆಂದು " ಕೇಳುತ್ತಾನೆ. ಬರೀ ಮೈ ಮತ್ತು ತುಂಡು ಪಂಚೆ ಉಟ್ಟು ಕ್ಷಾರಕ್ಕೆ ಕುಳಿತಿದ್ದಾಗ ಸಹಾಯಕ್ಕಾಗಿ ಬಂದ ಬ್ರಾಹ್ಮಣನಿಗೆ ಬರಿಗೈಯಿಂದ ಹಾಗೆ ಕಳಿಸುವುದು ಧರ್ಮವಲ್ಲವೆಂದು ತನ್ನ ಬಲಗೈಯೊಳಗಿನ ಬಂಗಾರದ ಹರಳಿನ ಉಂಗುರವನ್ನು ಎಡಗೈಯಿಂದ ತೆಗೆದು ಬ್ರಾಹ್ಮಣನಿಗೆ ಕೊಡಲು ಹೋಗುತ್ತಾನೆ.

ಎಷ್ಟಾದರೂ ಬ್ರಾಹ್ಮಣ ! " ಮಹಾಪ್ರಭು ತಾವು ದಾನವನ್ನು ಎಡಗೈಯಿಂದ ಕೊಡುತ್ತಿದ್ದೀರಿ. ಅದು ಶುಭ ಲಕ್ಷಣವಲ್ಲ. ತಾವು ಆದನ್ನು ಬಲಗೈಯಿಂದ ಕೊಡಬೇಕೆಂದು" ವಿನಂತಿಸಿಕೊಳ್ಳುತ್ತಾನೆ. ಆಗ ಕರ್ಣ ಎಂತಹ ಮಾರ್ಮಿಕವಾದ ಮಾತನ್ನು ಹೇಳುತ್ತಾನೆಂದರೆ : "ಎಡಗೈಯೊಳಗಿಂದ ಉಂಗುರ ಬಲಗೈಯೊಳಗೆ ಬರುವುದರೊಳಗೆ ಮನಸ್ಸು ಕೊಡಬಾರದೆಂದು ಅನ್ನಿಸಿದರೆ ನೀನು ದಾನ ಸಿಗದೆ ಹಗೆ ಬರಿಕೈಯಿಂದ ಹೋಗಬೇಕಾಗುತ್ತದೆ. ಕೊಡುವವರ ಮನಸ್ಸು ಶುಭವಾಗಿರಬೇಕೆ ಹೊರತು, ಕೈಗಳಲ್ಲ ! " ಶುಭ - ಅಶುಭ ಅಲ್ಲ. ತೆಗೆದುಕೋ ಹೋಗು ಎಂದು ಎಡಗೈಯಿಂದ ಕೊಟ್ಟು ಕಳಿಸುತ್ತಾನೆ. ಇದು ಕರ್ಣನ ವೈಚಾರಿಕ ನಿಲುವನ್ನು ಎತ್ತಿ ತೋರಿಸುವ ಪ್ರಸಂಗವಲ್ಲದೆ ಮತ್ತೇನು ?

## ಸಮನ್ವಯ ಲೋಕದ ಸಾಮರ್ಥ್ಯ ಪಡೆದ ಕೃತಿ

ಧರ್ಮ ಮತ್ತು ದಗಲ್ ಬಾಜಿಗಳು ಪುಸ್ತಕದಲ್ಲಿ ಬಳಕೆಯಾಗಿರುವ ಶಬ್ದ ಸ್ಫೋಟ ಅರ್ಥ ಸ್ಫೋಟ , ಉಂಟಾಗಿರುವ ವಿಚಾರ ವಿಪ್ಲವ ಅಸಂಬದ್ಧ ವಾದಗಳೆಲ್ಲವನ್ನೂ ಸ್ಫೋಟಿಸಿ - ಸರ್ವ ಸಮನ್ವಯದ ಲೋಕವೊಂದನ್ನು ಉದ್ಭವಗೊಳಿಸಿವ ಸಾಮರ್ಥ್ಯ ಪಡೆದಿದೆ. ೦ ಡಾ. ಎಲ್. ಬಸವರಾಜು ಮೈಸೂರು



# ಸ್ತ್ರೀ ಅಬಲೆಯಲ್ಲ !

ರಾಷ್ಟ್ರದ ಮಹಾನ್ ವ್ಯಕ್ತಿಯಾದ ಗಾಂಧೀಜಿಯ ಚಿಂತನೆಗಳು ನಮ್ಮ ಬದುಕಿನ ಅಮೂಲ್ಯ ಅಣಿ ಮುತ್ತುಗಳು. ಜೊತೆಗೆ ಆತನಲ್ಲಿದ್ದ ಅಸೀಮವಾದ ಧೈರ್ಯ ಕೂಡ ಗಾಂಧೀಜಿಯು ವ್ಯಕ್ತಿತ್ವಕ್ಕೆ ವಿಶೇಷವಾದ ಮೆರಗನ್ನು ತಂದು ಕೊಟ್ಟಿತ್ತು. ಡೆನ್ಮಾರ್ಕಿನ ಲ್ಯಾಂಡ್ರೀಸ್ ಎಂಬ ಬರಹಗಾರನು ಯಾವನಿಗೆ ಬುದ್ಧಿ ಇದೆಯೋ ಅವನಿಗೆ ಧೈರ್ಯವೂ ಇರಬೇಕು ಎಂದು ಹೇಳಿದ್ದಾನೆ. ಇದನ್ನೇ ಮುಪ್ಪುರಿಗೊಂಡ ಗಾಂಧೀಜಿ ಮೈತಳೆದಿದ್ದರು.

ಮಾನವ ಜನಾಂಗದ ಅರ್ಧದಷ್ಟಿರುವ ಮಹಿಳೆಯರ ಬಗೆಗೂ ಗಾಂಧೀಜಿಯವರು ಅಪಾರವಾದ ಕಳಕಳಿಯನ್ನು ವ್ಯಕ್ತಪಡಿಸುತ್ತಿದ್ದರು. ಅವರನ್ನು ಎಂದೂ ನಿಕೃಷ್ಟವಾಗಿ ಕಂಡುದಿಲ್ಲ. ಈ ಬಗೆಗೆ ಶ್ರೀಮತಿ ಕಮಲಾದೇವಿಯವರು ತಮ್ಮ ಒಂದು ಲೇಖನದಲ್ಲಿ ಗಾಂಧೀಜಿ ಮಹಿಳೆಯರ ಬಗೆಗೆ ತಳೆದಿದ್ದ ನಿಲುವುಗಳ ಕುರಿತು ತಿಳಿಸಿದ್ದಾರೆ.

ಸ್ತ್ರೀಯು ನಿಃಸಂಶಯವಾಗಿ ನಾಯಕಿಯಾಗುವವಳು ಎಂದು ನಾನು ದೃಢವಾಗಿ ನಂಬಿದ್ದೇನೆ. ಅವಳು ಮಾನವನ ಬೆಳವಣಿಗೆಯಲ್ಲಿ ತನ್ನ ಸ್ಥಾನವನ್ನು ಸಂಪಾದಿಸಿ ತಾನು ಅಬಲೆ ಎನ್ನುವ ಭಾವವನ್ನು ತೊಡೆದುಹಾಕಬಲ್ಲಳು.

ಪುರುಷ, ಸ್ತ್ರೀ ಎಲ್ಲರಿಗೂ ಒಂದೇ ಆತ್ಮ, ಒಂದೇ ಶಕ್ತಿ ಇರುವ ವಿಚಾರವೇ ನನ್ನ ಈ ಯೋಚನೆಗೆ ಹಿನ್ನೆಲೆ... ಹೀಗೆ ಸ್ತ್ರೀ ಪುರುಷರು ಮೂಲತಃ ಆತ್ಮದಲ್ಲಿ ಒಂದೇ ರೀತಿಯಾಗಿ ಇರುವುದರಿಂದ ಅವರ ಸಮಸ್ಯೆಗಳ ತಿರುಳೂ ಒಂದೇ, ಇಬ್ಬರ ಅಂತರಂಗಗಳೂ ಒಂದೇ, ಅವರ ಭಾವನೆಗಳೂ ಒಂದೇ , ಅವರ ಜೀವನವೂ ಒಂದೇ , ಒಬ್ಬರ ಪ್ರತಿರೂಪ ಮತ್ತೊಬ್ಬರು. ಒಬ್ಬರ ನೆರವಿಲ್ಲದೆ ಇನ್ನೊಬ್ಬರು ಜೀವಿಸಲಾರರು.

ಇಬ್ಬರ ಕಾರ್ಯಕ್ಷೇತ್ರ ಬದಲಾದರೂ ಕಾರ್ಯನೆಲೆ ಮಾತ್ರ ಒಂದೆ ಆಗಿದೆ. ಅವರ ಸಾಮಾನ್ಯ ಸಂಸ್ಕೃತಿ ಮತ್ತು ಗುಣಗಳೂ ಸಹ ಒಂದೇ ರೀತಿಯಾಗಿವೆ. ಸ್ತ್ರೀ ಪುರುಷನ ಜೊತೆಗಾರ್ತಿ.ಅವನಷ್ಟೇ ಬುದ್ಧಿ ಶಕ್ತಿ ಅವಳಿಗಿದೆ. ಅವನ ಪ್ರತಿಯೊಂದು ಕಾರ್ಯದಲ್ಲೂ ಭಾಗವಹಿಸಲು ಅವಳು ಬದ್ಧಳಾಗಿದ್ದಾಳೆ. ಅವನ ಸಂಗಡ ಸಲಿಗೆಯಿಂದ ಸ್ವಾತಂತ್ರ್ಯದಿಂದ ವರ್ತಿಸಲು ಅವನಷ್ಟೇ ಹಕ್ಕು ಅವಳಿಗೂ ಇದೆ. ಅವಳು ಉಚ್ಚ ಸ್ಥಾನವನ್ನು ಗಳಿಸಲು ಪುರುಷನಂತೆಯೇ ಯೋಗ್ಯಳಾಗಿದ್ದಾಳೆ. ಆದರೆ ಇವೆಲ್ಲವೂ ಓದುವುದರಿಂದ, ಬರೆಯುವುದರಿಂದ ಕಲಿತು ಬರುವಂಥದಲ್ಲ. ಸಹಜವಾಗಿ, ನೈಸರ್ಗಿಕವಾಗಿ ಬರಬೇಕು. ಅದು ಅಂತರಾಳದಲ್ಲಿ ಪರಸ್ಪರ ಬಗೆಗೆ ಒಡಮೂಡುವ ಪ್ರೇಮದಿಂದ ಬರುವಂಥದು. o ಮುತ್ತೂರು ಕೃಷ್ಣಮೂರ್ತಿ

Statremnet about ownership& other particulars of AGNI ANKUR Fortnightly, Shahapur as required under Rule 8 of Registration of Newspaper(Central) Rule, 1956

FROM -IV
(See Rule 8)

| | |
|---|---|
| 1. Place of Publication | Shahapur |
| 2. Peiodicity of Publication | Fortnightly |
| 3. Printers Name | Rajendra Patil |
| Whethe Citizen of Indiia | Yes |
| Address | Super Market Gulbarga |
| 4. Publisher /Editor/ Owner Name | Vishwaradhya Satyampet @ vishwa Satyam |
| Whether Citizen of India/Adress | Yes/ SHAHAPUR- GULBARGA (D) karnataka |

I, Vishwa Satyam @ vishwaradhya Satyampet hereby declare that the particulars given above are true to the best of my knowledge and belief.

Date : 1-3-2009 VISHWARADHYA SATYAMPET

ಜಾಗೃತಿ

# ಕುಲಾಂತರಿ ತಳಿಯ ಆಹಾರ ಬರುತ್ತಿದೆ !



*ವೈರಸ್ಯ ಬ್ಯಾಕ್ಟೀರಿಯಾ,ಚೆಳು, ಜೇಡ ಮತ್ತಿತರ ಜೀವಿಗಳಿಂದ ವಂಶವಾಹಿಗಳನ್ನು ಹೊರತೆಗೆದು ಬದನೆ, ಬೆಂಡೆಕಾಯಿ, ಆಲೂಗಡ್ಡೆ,ಟೊಮ್ಯಾಟೋ, ಮೆಕ್ಕೆಜೋಳದಂಥ ಆಹಾರಧಾನ್ಯಗಳ ವಂಶವಾಹಿಯೊಳಗೆ ಬಲವಂತದಿಂದ ಸೇರಿಸಲಾಗುತ್ತದೆ. ಇದೇ ಕುಲಾಂತರಿ ಆಹಾರ ಧಾನ್ಯ (ಜಿ.ಎಂ.ಫುಡ್ )

*ಕುಲಾಂತರಿ (ಜಿ.ಎಂ.ಫುಡ್ ) ಆಹಾರ ಧಾನ್ಯಗಳು ಭಾರತದ ಮಾರುಕಟ್ಟೆಯನ್ನು ಪ್ರವೇಶಿಸಲಿವೆ.

*ಪ್ರಯೋಗಾಲಯದಲ್ಲಿ ಈ ಆಹಾರವನ್ನು ಇಲಿಗಳ ಮೇಲೆ ಪರೀಕ್ಷಿಸಿದಾಗ ಅವುಗಳ ಆರೋಗ್ಯ ಹದಗೆಟ್ಟು ಹೋದ ಆತಂಕಕಾರಿ ಸಂಗತಿ ಪತ್ತೆಯಾಗಿದೆ. ಇಷ್ಟೇ ಅಲ್ಲ, ಸಾಕಷ್ಟು ಇಲಿಗಳು ಅಕಾಲಿಕ ಸಾವಿಗೆ ತುತ್ತಾದವು. ಕುಲಾಂತರಿ ಆಹಾರ ಸೇವಿಸದ ಪ್ರಾಣಿಗಳ ಸಂತಾನಶಕ್ತಿ ಕುಂಠಿತಗೊಂಡು ಅವುಗಳ ಅಂಗಗಳು ಹಾಗೂ ಕೋಶಗಳು ಹಾನಿಗೆ ಈಡಾಗಿವೆ.

*ಒಮ್ಮೆ ಕುಲಾಂತರಿ ಬೆಳೆ ಬೆಳೆಯಲು ಆರಂಭವಾದರೆ, ನಿಸರ್ಗದಲ್ಲಿನ ವಂಶವಾಹಿ ವ್ಯವಸ್ಥೆ ಸಂಪೂರ್ಣ ಬುಡಮೇಲಾಗುತ್ತಿದೆ. ಇದನ್ನು ಮತ್ತೆ ಸರಿಪಡಿಸುವುದು ಅಸಾಧ್ಯ. ನಿರ್ಮೂಲನೆ ಮಾಡಲು ಅಸಾಧ್ಯವಾಗದ ಕೀಟ, ರೋಗ ಹಾಗೂ ಕಳೆ ಸಮಸ್ಯೆ ಉದ್ಭವವಾಗುವ ಸಾಧ್ಯತೆ ಇದೆ.

*ಬಹುತೇಕ ಐರೋಪ್ಯ ರಾಷ್ಟ್ರಗಳೂ ಸೇರಿದಂತೆ ಜಗತ್ತಿನ ಅನೇಕ ಕುಲಾಂತರಿ ಆಹಾರ ಬೆಳೆಗೆ ನಿಷೆಧ ವಿಧಿಸಲಾಗಿದೆ.

*ಕುಲಾಂತರಿ ಆಹಾರ ಬೆಳೆ ಪರಿಚಯಿಸುವುದು ಬೇಡ ಎಂದು ಪ್ರಮುಖ ವಿಜ್ಞಾನಿಗಳೇ ಆಗ್ರಹಿಸಿದ್ದಾರೆ.

ಕೇಂದ್ರ ಸರ್ಕಾರದ ಆರೋಗ್ಯ ಸಚಿವ ಶ್ರೀ ಅನ್ಬುಮಣಿ ರಾಮದಾಸ್ ಕುಲಾಂತರಿ ಆಹಾರದ ವಿರುದ್ಧ ಹೇಳಿಕೆ ನೀಡಿದ್ದಾರೆ. ಆದರೆ ಕರ್ನಾಟಕ ಸರಕಾರ ಮಾತ್ರ ಈ ವಿಷಯದಲ್ಲಿ ಇನ್ನೂ ಮೀನಮೇಷ ಮಾಡುತ್ತ ಕಾಲಹರಣ ಮಾಡುತ್ತಿದೆ.

ನಮ್ಮ ಬದುಕಿಗೆ ಕಂಟಕಪ್ರಾಯವಾಗುವ ಕುಲಾಂತರ ತಳಿಯನ್ನು ಬೆಂಬಲಿಸುವ ಸರಕಾರವನ್ನು ನಾವು ಬೆಂಬಲಿಸಬೇಕೆ ? ವಿಚಾರಮಾಡಿ ! o ಬಸವರಾಜ ರಾಚರೆಡ್ಡಿ



# ನಾನು ನಚ್ಚಿರಲಿಲ್ಲ

– ಎಚ್.ಎಸ್.ಮುಕ್ತಾಯಕ್ಕ

ನನ್ನ ಕಣ್ಣಂಚಿನಲಿ ಕನಸಾಗಿ ತೇಲುವಿಯೆಂದು ನಾನು ನಂಬಿರಲಿಲ್ಲ
ನನ್ನ ಪ್ರತಿ ನಿಮಿಷವನ್ನು ನೀನು ಆಳುವಿಯೆಂದು ನಾನು ನಚ್ಚಿರಲಿಲ್ಲ

ಒಂಟಿನತದ ಕನ್ನಡಿಯ ಚೂರುಗಳ ಮೇಲೆ ಹೆಜ್ಜೆ ಇಡುತ್ತ ನಾನು
ಚೆಂಗುಲಾಬಿಯರಳಿಸುತ್ತ ಬರುವೆನೆಂದು ನಾನು ತಿಳಿದಿರಲಿಲ್ಲ

ತಣ್ಣಗೆ ಮಾತಿಲ್ಲದೆ ಕಾಲನ ಜೇಬಿನಲ್ಲಿರುವ ಕೊನೆಯ ನಾಣ್ಯಕ್ಕಾಗಿ
ತಡೆಕಾಡುವಾಗ , ನೀ ತೋಳು ಚಾಚುವಿಯೆಂದು ನಾನು ಭಾವಿಸಿರಲಿಲ್ಲ

ನನ್ನ ಗಲ್ಲದ ಗುಂಟ ಜಾರುವ ಮುತ್ತುಗಳನ್ನು ಬೊಗಸೆಯಲಿ ಹಿಡಿದು
ರಾತ್ರಿಯಾಗಸವನ್ನು ಸಿಂಗರಿಸುವಿಯೆಂದು ನಾನು ಕಲ್ಪಿಸಿರಲಿಲ್ಲ

ಸಪ್ತಸಾಗರ ದಾಟಿ ನೀ ಬಂದ ಚುಕ್ಕೆಗಳ ಎಡವುತ್ತ ನಾ ಬಂದೆ
ಸಾವಿನಚೆಯ ಲೋಕಕ್ಕೆ ಸಾಗಿ ಹೋಗುವೆವೆಂದು ನಾನು ಊಹಿಸಿರಲಿಲ್ಲ.



# ಅವಳು ಹಾದು ಹೋದದ್ದು ......

ಪಕ್ಕದಲ್ಲಿ ಯಾರೋ
ಹಾದು ಹೋದರು
ಅದು ನನ್ನ ಹುಡುಗಿ
ಎಂದು ನಂತರ ಗೊತ್ತಾಯಿತು
ಅವಳು ಹಾಯ್ದು ಹೋದದ್ದು
ರಸ್ತೆಯ ಮೇಲಲ್ಲ
ನನ್ನ ಹೃದಯದ ಒಳಗೆ !

೦ ಬಸ್ಸು ಬಿಸನಾಳ

## ಕವಡೆ ಕಾಯಿ

# ಗೋಡ್ಸೆವಾದಿಗಳ ಬಾಯಿತ್ತಿ ಗಾಂಧಿವಾದವೆ ?



o ಸುರೇಶ್ ನಾಯ್ಡು ಬೀದರ
ನಮ್ಮ ನಾಗಮಾರಪಳ್ಳಿ ಏಕೆ ಪಕ್ಷದಿಂದ ಪಕ್ಷಕ್ಕೆ ಜಿಗಿದು ತನ್ನ ಕೊನೆಗಾಲದಲ್ಲಿ ಚೆಡ್ಡಿ ತೊಟ್ಟುಕೊಂಡಿದ್ದಾನೆ , ಗುರು ?
ಚೆಡ್ಡಿ ತೊಟ್ಟುಕೊಳ್ಳದೆ ಹೋದರೆ ಬಟಾಬಯಲಲ್ಲಿ ಬೆತ್ತಲಾಗುವ ಸರದಿ ನಿಮ್ಮ ನಾಗಮಾರಪಳ್ಳಿಗೆ ಬಂದಿದೆ , ಶಿಷ್ಯ ?!

o ಚಂದ್ರಕಾಂತ ಬಿದರಾಣಿ ಜೇವರ್ಗಿ
ಬಿಜೆಪಿ ಸರಕಾರ ಕಂಡ ಕಂಡ ಜಾತಿಗಳ ಸ್ವಾಮಿಗಳ ಮಠಕ್ಕೆ ಹಣ ಬಿಡುಗಡೆ ಮಾಡುವ ಗುಟ್ಟೇನು ಸರ್ ?
ಧರ್ಮಗಳೆಂಬ ಅಫೀಮಿನಲ್ಲಿ ನಿಮ್ಮನ್ನು ಕಂಠಮಟ ಸಿಕ್ಕಿಸುವ ಹುನ್ನಾರ, ಸಾರ್...

o ಕರೀಂಪಟೇಲ ಶಹಾಪುರ
ದೇವೇಗೌಡರೇಕೆ ಕೆಲವೊಮ್ಮೆ ದೆವ್ವ ಬಂದವರಂತೆ ಆಡುತ್ತಾರೆ ?
ಅವರು ಎಂದಾದರೂ ದೇವರಂತೆ ವರ್ತಿಸಿದ್ದಾರೆಂದು ನಿಮ್ಮ ಅಂಬೋಣವೆ ?

o ಗೋಪಾಲ ಎಸ್. ಶಹಾಪುರ
ಗಾಂಧಿಯನ್ನು ಗೊಂದಿರುವ ಗೋಡ್ಸೆವಾದಿಗಳಿಂದ ಗಾಂಧಿವಾದ ಕೇಳಬೇಕಾಯಿಲ್ಲ ?
ಅದು ಗಾಂಧಿವಾದವೆಂದು ಮೇಲ್ನೋಟಕ್ಕೆ ಕಾಣಿಸಿದರೂ ಅದರಲ್ಲೂ ಗೋಡ್ಸೆವಾದವೇ ಇರುತ್ತದೆ , ಹುಷಾರ್.... !

o ನಾಗರತ್ನ ಎಸ್. ಸುರಪುರ
ಅನಂತಕುಮಾರ ಕೊನೆಗೂ ತನ್ನ ಗಾಳಕ್ಕೆ ಯಡ್ಡಿಯನ್ನು ಸಿಕ್ಕಿಸಿದ್ದಾನಲ್ಲ ?
ಇನ್ನೂ ನೋಡ್ತಾ ಇರ್ರೀ... ಚುನಾವಣೆ ಮುಗಿಯುವುದೊಂದೆ ತಡ ಯಡ್ಡಿಯ ಬುಡಕ್ಕೆ ನೀರು ಬಿಡುತ್ತಾನೆ !

o ವೀಣಾಕುಲ್ಕರ್ಣಿ ರಾಯಚೂರು
ಲಂಕೇಶ್ ಇಲ್ಲದಿರುವ ಈ ದಿನಗಳಲ್ಲೂ ಆತನ ಹೆಸರು ಕೇಳುತ್ತಲೆ ಇಲ್ಲಿನ ಬರಹಗಾರ್ತಿಯೊಬ್ಬಳು ನಸುನಾಚಲು ಕಾರಣವೇನು ?

o ಪ್ರಭು ಶಹಾಪುರ
ಬಿ.ಜೆ.ಪಿ ಸರಕಾರದಲ್ಲಿ ಪುರೋಹಿತರಿಗೆ ರತ್ನಗಂಬಳಿ ಹಾಸಲು ಕಾರಣವೇನು ?
ಚಡ್ಡಿಗಳ ಸರಕಾರವೇ ಪುರೋಹಿತರ ಸರಕಾರ ಮಾರಾಯಾ ?

# ರೀಯಲ್ ಅಪ್ಪ -ಮಗಳು ; ರೀಲ್ ಮುಸ್ಸಂಜೆ ಗೆಳತಿಯಲ್ಲಿ

ಅಪ್ಪ - ಮಗಳು ಹೀರೋ - ಹಿರೋಹಿನ್ ಆಗಿ ಚಿತ್ರದಲ್ಲಿ ನಟಿಸುತ್ತಿರುವ ಸಂಗತಿ ಭಾರತೀಯ ಸಂಸ್ಕೃತಿಯ ವಾರಸ್ಧಾರನಂತೆ ಹೇಳಿಕೊಳ್ಳುವ ಪ್ರಮೋದ ಮುತಾಲಿಕ್ ಗೆ ಗೊತ್ತಿರಲಿಕ್ಕಿಲ್ಲ. ಬಹುಶಃ ಗೊತ್ತಿದ್ದರೆ ಆತ ಬಂಬಡಾ ಬಜಾಯಿಸದೆ ಬಿಡುತ್ತಿರಲಿಲ್ಲ. ಹೌದು ಇದು ನಿಜಕ್ಕೂ ಇಡೀ ಪ್ರಪಂಚದ ಚಿತ್ರರಂಗವೆ ಮೂಗಿನ ಮೇಲೆ ಬೆರಳಿಟ್ಟು ನೋಡುವ ಕೇಳುವ ಸಂಗತಿ. ಈ ವಿಷಯ ಗೊತ್ತಾದತಕ್ಷಣ ಎಲ್ಲರ ಹುಬ್ಬು ಸಹಜವಾಗಿಯೆ ಗಂಟು ಹಾಕಿಕೊಳ್ಳುತ್ತವೆ.

ಆದರೆ ಈ ಚಿತ್ರದ ನಿರ್ಮಾಪಕ , ನಟ ಬಿ.ಪಿ.ಶ್ರೀನಿವಾಸ ಜೊತೆ ಮಾತಾಡುತ್ತ ಸದರಿ ಚಿತ್ರದ ಕತೆ ಕೇಳಿದರೆ ಆಗ ಮಾತ್ರ ನೆಮ್ಮದಿಯ ನಿಟ್ಟುಸಿರು ಬಿಡುತ್ತೇವೆ. ಬೆಂಗಳೂರಿನ ಕೃಪಾನಿಧಿ ಕಾಲೇಜಿನಲ್ಲಿ ಪಿಯು ಓದುತ್ತಿರುವ ಶಾಲಿನಿಗಾಗಿ ತಂದೆ ಬಿ.ಪಿ.ಶ್ರೀನಿವಾಸ ಚಿತ್ರವೊಂದನ್ನು ನಿರ್ದೇಶಿಸುವ ಇರ್ಯಾದೆ ಇಟ್ಟುಕೊಂಡಿದ್ದರಂತೆ. ಆದರೆ ತನ್ನ ಮಗಳು ಶಾಲಿನಿಯ ಫೋಟೋಸೆಷನ್ ಮಾಡಿಸುತ್ತ , ತನ್ನದೂ ಒಂದೆರಡು ಫೋಟೋಸೆಷನ್ ಮಾಡಿಸಿದ್ದಾರೆ. ಚಿತ್ರದಲ್ಲಿಯ ಶ್ರೀನಿವಾಸ್ ಅವರ ಲುಕ್ ನೋಡಿದ ಬಹಳಷ್ಟು ಜನ ನಿಮ್ಮ ಚಿತ್ರದಲ್ಲಿ ನೀವೇ ಮುಖ್ಯ ಪಾತ್ರಧಾರಿಯಾಗಿ ನಟಿಸಬಾರದ್ಯಾಕೆ ?

ಹೇಗೂ ಚಿತ್ರದಲ್ಲಿ ವಲ್ಗಾರಿಟಿ ಇಲ್ಲ. ಜೊತೆಗೆ ಪ್ರೊಫೇಸರ್‌ನೊಬ್ಬ ತಾನು ತಾನಾಗಿಯೇ ತನ್ನ ವಿದ್ಯಾರ್ಥಿಯನ್ನು ಪ್ರೀತಿಸುತ್ತ ಅವಳ ಪ್ರೇಮ ಪಾಶದಲ್ಲಿ ಬೀಳುವ ಚಿತ್ರ. ಆದರೆ ಈ ಚಿತ್ರದ ಕತೆಯಲ್ಲಿ ಹುಡುಗಿಗೆ ಇದ್ಯಾವುದೂ ಗೊತ್ತಿಲ್ಲ. ಆಕೆ ತನ್ನ ಪ್ರಿಯಕರನನ್ನಾಗಿ ಇದೆ ಪ್ರೊಫೆಸರ್‌ರಿಂದ ಪ್ರೇಮಪತ್ರ ಬರೆಸಿಕೊಳ್ಳುತ್ತಿರುತ್ತಾಳೆ.



ಪ್ರೊಫೆಸರ್ - ಸ್ಟೂಡೆಂಟ್ ಪ್ರೀತಿ ಇದ್ದರೂ ಎಲ್ಲಿಯೂ ಸಭ್ಯತೆ ಗಡಿದಾಟಿಲ್ಲ. ಡ್ಯೂಯಟ್ ಹಾಡಿಲ್ಲ. ಆದರೆ ಒಮ್ಮೆ ಮಾತ್ರ ಪ್ರೊಫೆಸರ್‌ಗೆ ಹಾರ್ಟ್ ಅಟ್ಯಾಕ್ ಆದಾಗ ಈ ಸ್ಟೂಡೆಂಟ್ ಬಾಯಿಗೆ ಬಾಯಿ ಇಟ್ಟು ತಮ್ಮ ಪ್ರೊಫೆಸರನ ಜೀವ ಉಳಿಸುತ್ತಾಳೆ........... ಈ ದೃಶ್ಯಗಳೆಲ್ಲ ಇವೆ.

ಆದರೂ ಮನೆ ಮಂದಿಯೆಲ್ಲ ಕುಳಿತು ನೋಡಬಹುದಾದ ಚಿತ್ರವನ್ನು ನಿರ್ಮಿಸಿದ್ದೇನೆ ಎಂದು ಹೇಳುತ್ತಾರೆ ಬಿ.ಪಿ.ಶ್ರೀನಿವಾಸ.

ಮುಸ್ಸಂಜೆಯ ಗೆಳತಿ ಅಪ್ಪ - ಮಗಳು ನಟಿಸಿದ ಚಿತ್ರ ಎಂಬ ಹೆಗ್ಗಳಿಕೆಯಿಂದ ಓಡುತ್ತದೋ ಅದು ತನ್ನದೆ ಆದ ನಟನೆ - ಚಿತ್ರ ಕತೆಯಿಂದ ಓಡುತ್ತದೋ ಅಥವಾ ತೋಪೆದ್ದು ಹೋಗುತ್ತದೋ ಕಾಲವೆ ನಿರ್ಣಯಿಸುತ್ತದೆ , ಅಲ್ಲವೆ ?

# ಸಿನೆಮಾ

ಕನಸುಗಣ್ಣಿನ ಹುಡುಗ ಎಂದೆ ಎಲ್ಲರಿಗೂ ಚಿರಪರಿಚಿತರಾದ ರವಿಚಂದ್ರನ್ ಅವರು ಇತ್ತೀಚೆಗೆ ಹೆಚ್ಚು ಚಿತ್ರಗಳಲ್ಲಿ ಕ್ರೀಯಾಶೀಲಾಗಿಲ್ಲ. ಆದರೆ ಸಿನೆಮಾ ಖಯಾಲಿಯಿಂದ ಮಾತ್ರ ಹಿಂದೆ ಸರಿದಿಲ್ಲ. ಇದನ್ನು ಕೆಲವರು ತಪ್ಪಾಗಿ ತಿಳಿದುಕೊಂಡು ರವಿಚಂದ್ರನ್ ಆರ್ಥಿಕ ಸಂಕಟದಿಂದ ನರಳುತ್ತಿದ್ದಾರೆ ಎಂದು ಬಣ್ಣಿಸುವವರೂ ಇದ್ದಾರೆ. ಬಡತನ - ಒಡೆತನದ ಕುರಿತು ಯಾರು ಏನೇನೋ ಬರೆದಿರಬಹುದು. ಆದರೆ ಇಷ್ಟು ಮಾತ್ರ ರವಿಚಂದ್ರನ್ ಕಲಾವಂತಿಕೆಯಿಂದ ಹಿಂದೆ ಸರಿಯುವ ಬಡವರಂತೂ ಅಲ್ಲ.

ಇದೇನೆ ಇರಲಿ :

ರವಿಯ ಸಹೋದರ ಬಾಲಾಜಿಗೆ ರವಿ ಬೆನ್ನೆಲುಬಾಗಿ ಬೆಳೆಸಬೇಕೆಂದರೂ ಅದು ಏಕೋ ಅಷ್ಟು ವರ್ಕಔಟ್ ಆಗುತ್ತಿಲ್ಲ. ಇತ್ತೀಚಿನ ಬಾಲಾಜಿ ನಟನೆಂಯ ರಾಜಕುಮಾರ್ ಬಿಡುಗಡೆಯಂತೂ ಆಗಿದೆ. ಅದೂ ಕೂಡ ಹೇಳಿಕೊಳ್ಳುವಂಥ ಓಪನಿಂಗ್ ಪಡೆದಿಲ್ಲ.

ಇದೆಲ್ಲದರ ನಡುವೆಯೂ ಇನಿಯಾ ಎಂಬ ಮತ್ತೊಂದು ಚಿತ್ರದ ಚಿತ್ರೀಕರಣ ಸಾಗಿದೆ. ಮುಸ್ಸಂಜೆ ಮಾತು ಚಿತ್ರದ ನಿರ್ದೇಶಕ ಮಹೇಶ್ ಪ್ರಭಾವಕ್ಕೆ ಒಳಗಾದ ಬಾಲಾಜಿ ಪೂಜಾಗಾಂಧಿಯ ಜೊತೆ ಹೀರೋ ಆಗಿ ನಟಿಸುತ್ತಿದ್ದಾನೆ. ಪೂಜಾಳೊಂದಿಗೆ ನಟಿಸಿದ ಮೇಲಾದರೂ ತನ್ನ ಚಾರ್ಮ ಬೆಳೆಸಿಕೊಳ್ಳಬಹುದು ಎಂಬುದು ಬಾಲಾಜಿಯ ಇಂಗಿತ.



## ಬಾಲಾಜಿಯ ದೈವಭಕ್ತಿಯೂ ಸಿನೇಮಾ ರಂಗವೂ

ಶಿರಡಿ ಸಾಯಿಬಾಬಾನ ಕಟ್ಟಾ ಭಕ್ತನಾಗಿರುವ ಬಾಲಾಜಿ ತನ್ನ ನಂಬುಗೆಗೆ ಕೊಡುವ ರವಾಷ್ಟಾದರೂ ಗಮನವನ್ನು ತನ್ನ ನಟನೆಯ ಕಡೆಗೆ ಕೊಟ್ಟರೆ ಕನ್ನಡ ಚಿತ್ರರಂಗದಲ್ಲಿ ತನ್ನ ಅಣ್ಣ ಮಾಡಿದ ಮ್ಯಾಜಿಕ್ ಮಾಡಬಹುದು.ಅದು ಬಿಟ್ಟು ತನ್ನ ಕರ್ತವ್ಯಕ್ಕಿಂತ ದೈವ ನಂಬುಗೆಯಲ್ಲಿ ತೊಡಗಿಕೊಂಡರೆ ಆ ದೇವರೂ ಕಾಪಾಡಲಾರನೇನೋ ?

AGNI ANKUR Kannada Fortnightly Price Rs.10/-
March -2009 Rg.No.23/10/AI/Tc89/PMG/KA/NK/GLB/35/08-10

## ನಾಡಿನ ಜನತೆಗೆ
## ಯುಗಾದಿ ಹಬ್ಬದ
## ಹಾರ್ದಿಕ ಶುಭಾಶಯಗಳು



ಭಾವೈಕ್ಯತೆಯ ಹರಿಕಾರ
ತಿಂಥಣಿಯ ಮೌನೇಶ್ವರರು

## ಸಮಸ್ತ ವಿಶ್ವಕರ್ಮ
## ಸಮಜಾದ ಬಂಧುಗಳು

PUBLISHER, PROPRIETOR & EDITOR : VISHWARADHYA SATYAMPET
Basavamarga, C. B. Colony SHAHAPUR - Dist :Gulbarga , Cell: 9480161315
Printed At : Grenobles Pvt.Ltd., Super Market Gulbarga
e-mail : satyampet2008@ymail.com